# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೦, ೨೦೧೫ (ಭಾದ್ರಪದ ೧೯, ಶಕ ವರ್ಷ ೧೯೩೭)<br>Bengaluru, Thursday, September 10, 2015 (Bhadrapada 19, Shaka Varsha 1937) | ಸಂಚಿಕೆ ೩೭<br>Issue 37 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಶಿಕ್ಷಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಇಡಿ 369 ಪಿಜಿಸಿ 2014 ಬೆಂಗಳೂರು, ದಿನಾಂಕ: 02–05–2015.**

ಹೊಸ ಶಾಲೆ ನೋಂದಣಿ ಸಂಬಂಧ ಸರ್ಕಾರದ ಅಧಿಸೂಚನೆ ಸಂಖ್ಯೆ ಇಡಿ 369 ಪಿಜಿಸಿ 2014, ದಿ: 11–11–2014ರಲ್ಲಿ ಶಾಲೆಗಳಲ್ಲಿ ಕಲ್ಪಿಸಬೇಕಾದ ಮೂಲಭೂತ ಸೌಕರ್ಯಗಳ ಕುರಿತು ಕ್ರಮ ಸಂಖ್ಯೆ (1)ರಲ್ಲಿ '1 ರಿಂದ 5, 6 ರಿಂದ 8 ಮತ್ತು 9 ರಿಂದ 10ನೇ ತರಗತಿಗಳನ್ನು ತೆರೆಯಲು ಗ್ರಾಮೀಣ ಪ್ರದೇಶದಲ್ಲಿ ಕನಿಷ್ಟ ಎರಡು ಎಕರೆ, ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿ ಪ್ರದೇಶದಲ್ಲಿ ಕನಿಷ್ಟ ಒಂದೂವರೆ ಎಕರೆ ಹಾಗೂ ಬಿ.ಬಿ.ಎಂ.ಪಿ/ಮಹಾನಗರ ಪಾಲಿಕೆಗಳ ಪ್ರದೇಶಗಳಲ್ಲಿ ಕನಿಷ್ಟ 01 ಎಕರೆ ಪರಿವರ್ತಿತ ಭೂಮಿ ಆಡಳಿತ ಮಂಡಳಿಯ ಸ್ವಂತ ಹೆಸರಿನಲ್ಲಿ ಇರಬೇಕು ಅಥವಾ ಸದರಿ ಭೂಮಿಯು 30 ವರ್ಷಗಳ ಲೀಸ್ ಅವಧಿಗೆ ಸಂಸ್ಥೆಯ ಹೆಸರಿನಲ್ಲಿ ಇರಬೇಕು' ಎಂಬುದನ್ನು ಮಾರ್ಪಡಿಸಿ ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

1 ರಿಂದ 8ನೇ ತರಗತಿಯವರೆಗೆ ಶಾಲೆ ಪ್ರಾರಂಭಿಸಲು ಗ್ರಾಮೀಣ ಪ್ರದೇಶದಲ್ಲಿ/ನಗರಸಭೆ/ಪುರಸಭೆ/ಪಟ್ಟಣ ಪಂಚಾಯಿತಿ/ ಮಹಾನಗರ ಪಾಲಿಕೆಗಳ ವ್ಯಾಪ್ತಿಯ (ಬಿ.ಬಿ.ಎಂ.ಪಿ.ಯನ್ನು ಹೊರತುಪಡಿಸಿ) ಪ್ರದೇಶದಲ್ಲಿ ಕನಿಷ್ಟ ಒಂದು ಎಕರೆ ಪರಿವರ್ತಿತ ಭೂಮಿ/ಗ್ರಾಮ ಪಂಚಾಯಿತಿ ಇತ್ಯಾದಿ ಪ್ರಾಧಿಕಾರದಿಂದ ಶೈಕ್ಷಣಿಕ ಉದ್ದೇಶಗಳಿಗೆ ಲೈಸನ್ಸ್ ಮುಖಾಂತರ ಬಳಸಬಹುದಾದ ಕನಿಷ್ಟ ಒಂದು ಎಕರೆ ಭೂಮಿ–ಸ್ವಂತ ಹೆಸರಿನಲ್ಲಿ ಇರಬೇಕು ಅಥವಾ 30 ವರ್ಷಗಳ ಲೀಸ್ ಅವಧಿಗೆ ಸಂಸ್ಥೆಯ ಹೆಸರಿನಲ್ಲಿರಬೇಕು ( 1 ರಿಂದ 10ನೇ ತರಗತಿಯವರೆಗೆ ಒಂದೇ ಆವರಣದಲ್ಲಿ ಶಾಲೆ ಪ್ರಾರಂಭಿಸಲು ಒಂದು ಎಕರೆ ಹೊಂದಿರಬೇಕು. ಪ್ರತ್ಯೇಕವಾಗಿ 9 ಮತ್ತು 10ನೇ ತರಗತಿಯ ಪ್ರೌಢ ಶಾಲೆ ಪ್ರಾರಂಭಿಸಲು ಸಹ 1 ಎಕರೆ ಭೂಮಿ ಇರಬೇಕು)

ಬಿ.ಬಿ.ಎಂ.ಪಿ ಪ್ರದೇಶಗಳಲ್ಲಿ 1 ರಿಂದ 8ನೇ ತರಗತಿ ಶಾಲೆಗಳಿಗೆ ಕನಿಷ್ಟ ಅರ್ಧ ಎಕರೆ ಭೂಮಿ ಸ್ವಂತ ಹೆಸರಿನಲ್ಲಿ ಇರಬೇಕು ಅಥವಾ 30 ವರ್ಷಗಳ ಲೀಜ್ ಅವಧಿಗೆ ಸಂಸ್ಥೆಯ ಹೆಸರಿನಲ್ಲಿರಬೇಕು. 1 ರಿಂದ 8ನೇ ತರಗತಿಯ ಜೊತೆಗೆ 9 ಮತ್ತು 10ನೇ ತರಗತಿಗಳನ್ನು ಹೊಂದಲು ಇಚ್ಛಿಸುವ ಶಾಲೆಗಳು ಒಂದು ಎಕರೆ ಕನಿಷ್ಟ ಭೂಮಿ ಸ್ವಂತ ಹೆಸರಿನಲ್ಲಿರಬೇಕು.

ಬೆಂಗಳೂರು ಬೃಹತ್ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ 9 ಮತ್ತು 10ನೇ ತರಗತಿಗಳನ್ನು ಪ್ರತ್ಯೇಕವಾಗಿ ತೆರೆಯಲು ಅರ್ಧ ಎಕರೆ ಕನಿಷ್ಟ ಭೂಮಿ ಸ್ವಂತ ಹೆಸರಿನಲ್ಲಿ ಅಥವಾ 30 ವರ್ಷಗಳ ಲೀಜ್ ಅವಧಿಗೆ ಸಂಸ್ಥೆಯ ಹೆಸರಿನಲ್ಲಿರಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಪ್ರಾಥಮಿಕ)

PR-829

SC-1000

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕೇಂದ್ರ ವಲಯ ವೃತ್ತ, ಬೆಂಗಳೂರು ನಗರ ಜಿಲ್ಲೆ ನಂ.32, 2ನೇ ಮಹಡಿ, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದ ಕಟ್ಟಡ, ಡಿ. ದೇವರಾಜ ಅರಸು ರಸ್ತೆ (ರೇಸ್‌ಕೋರ್ಸ್ ರಸ್ತೆ) ಬೆಂಗಳೂರು-01**

**ಸಿಇಪಿ ಸಂಖ್ಯೆ: ಎಆರ್‌ಬಿ-ಸಿ(45)ಸಿಇಪಿ/144/2012-13 ದಿನಾಂಕ:27-05-2015**

**ವಿಷಯ:** ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು-560 055 ಈ ಬ್ಯಾಂಕಿನ ಅಮಲ್ಜಾರಿ ಸಂಖ್ಯೆ:ಎಆರ್‌ಬಿ-ಸಿ(45)ಸಿಇಪಿ/144/2012-13ಕ್ಕೆ ಸಂಬಂಧಪಟ್ಟಂತೆ ಮಾರಾಟ ಮಾಡಲಾದ ಸಾಲಗಾರರ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(7) ಅನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:**
1. ದಾವ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಕೆಎಂಇ/8/408/2012-13 ದಿನಾಂಕ:05-04-2013
2. ಅಮಲ್ಜಾರಿ ಸಂಖ್ಯೆ: ಎಆರ್‌ಬಿ-ಸಿ(45)ಸಿಇಪಿ/144/2012-13 ದಿನಾಂಕ: 22-06-2013
3. ಮಾರಾಟಾಧಿಕಾರಿ, ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ಲಿ., ಬೆಂಗಳೂರು ಇವರ ವರದಿ ದಿನಾಂಕ: 20-04-2015
4. ಈ ಕಾರ್ಯಾಲಯದ ಪತ್ರ ದಿನಾಂಕ: 13-05-2015
5. ಕಾರ್ಯದರ್ಶಿ, ಕ.ರಾ.ಸ. ಅಪೆಕ್ಸ್ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು ರವರ ಪತ್ರ ದಿನಾಂಕ: 18-05-2015

ಶ್ರೀ ವಿ.ರಾಘವೇಂದ್ರ ಬಿನ್ ವೆಂಕಟರಾಮಯ್ಯ ನಂ. 109, 4ನೇ ಕ್ರಾಸ್, 4ನೇ ಮುಖ್ಯ ರಸ್ತೆ, ಲಕ್ಷ್ಮೀ ಫೀಲ್ಡ್ಸ್ ಹಿಂಭಾಗ ಮತ್ತಿಕೆರೆ ಎಕ್ಸ್‌ಟೆನ್, ಬೆಂಗಳೂರು-560054 ಇವರು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಪಿ.ಯು.ಬಿ. ಗೃಹ ಶಾಖೆ, ಬೆಂಗಳೂರು ಈ ಬ್ಯಾಂಕಿನಲ್ಲಿ ಗೃಹ ಅಡಮಾನ ಸಾಲವಾಗಿ ರೂ. 17,00,000/- (ಹದಿನೇಳು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಸಾಲವಾಗಿ ಪಡೆದಿದ್ದು, ಸಾಲದ ಕಂತಿನ ಹಣವನ್ನು ನಿಗದಿತ ಅವಧಿಯೊಳಗೆ ಮರುಪಾವತಿ ಮಾಡದೇ ಸಾಲವು ಸುಸ್ತಿಯಾದ ಕಾರಣ ಬ್ಯಾಂಕಿನ ಶಾಖಾ ವ್ಯವಸ್ಥಾಪಕರು ಸಾಲಗಾರರ ವಿರುದ್ಧ ಕಲಂ 70ರ ಅಡಿಯಲ್ಲಿ ದಾವೆ ಹೂಡಿದ್ದು, ದಾವಾ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಕೆಎಂಇ/8/408/2012-13ರಂತೆ, ದಿನಾಂಕ:05-04-2013ರಂದು ಅವಾರ್ಡ್ ಪಡೆದು, ಸದರಿ ಅವಾರ್ಡ್ ಆದೇಶದನ್ವಯ ದಿನಾಂಕ:26-06-2013ರಂದು ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ-ಸಿ(45)ಸಿಇಪಿ/144/2012-13 ದಾಖಲು ಮಾಡಿರುತ್ತಾರೆ. ಸದರಿ ಅಮಲ್ಜಾರಿ ಅರ್ಜಿಯನ್ನು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ನಿ., ಮಾರಾಟಾಧಿಕಾರಿಯವರಿಗೆ ವಿಲೇವಾರಿಗಾಗಿ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಈ ಅಮಲ್ಜಾರಿ ಅರ್ಜಿಯನ್ನು ಕಾರ್ಯಗತಗೊಳಿಸಲು ಫಾರಂ ನಂ.2 ನ್ನು ಜಾರಿ ಮಾಡಲು ದಿನಾಂಕ:26-08-2013 ರಂದು ಸಾಲಗಾರರು ನೀಡಿರುವ ವಾಸದ ಮನೆ ವಿಳಾಸಕ್ಕೆ ಭೇಟಿ ಕೊಟ್ಟಿದ್ದು ಅವರು ಪ್ರಸ್ತುತ ಈ ವಿಳಾಸದಲ್ಲಿ ವಾಸವಾಗಿರದೇ ಇರುವ ಕಾರಣ ಸದರಿಯವರಿಗೆ ದೂರವಾಣಿ ಮೂಲಕ ಸಂಪರ್ಕಿಸಿ ಖುದ್ದು ಬೇಟಿ ಮಾಡಿ ಫಾರಂ ನಂ.2ನ್ನು ಜಾರಿ ಮಾಡಿ ಸಹಿ ಪಡೆಯಲಾಗಿರುವುದಾಗಿ ತಿಳಿಸಿರುತ್ತಾರೆ ಆಗೆಯೇ ಜಾಮೀನುದಾರರದ ಶ್ರೀ ಧೀರಜ್‌ಜೈನ್‌ರವರಿಗೂ ಸಹ ಖುದ್ದು ಬೇಟಿ ಮಾಡಿ ಫಾರಂ ನಂ.2ನ್ನು ಜಾರಿ ಮಾಡಿ ಸಹಿ ಪಡೆದಿರುವುದಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರು ತಿಳಿಸಿರುತ್ತಾರೆ. ಆದಾಗ್ಯೂ ಸಹ ಸಾಲಗಾರರು ಬ್ಯಾಂಕಿಗೆ ಸಾಲ ಮರುಪಾವತಿ ಮಾಡಲು ಕ್ರಮ ಕೈಗೊಳ್ಳದಿದ್ದ ಕಾರಣ ಸಾಲ ವಸೂಲಾತಿಗಾಗಿ ಅಡಮಾನ ಮಾಡಿದ ಆಸ್ತಿಯನ್ನು ಜಪ್ತಿ ಮಾಡಲು ಫಾರಂ ನಂ. 6ನ್ನು ಅಂಚೆ ನೋಂದಣಿ ಮೂಲಕ ಜಾರಿಮಾಡಲಾಗಿತ್ತು. ಆದರೂ ಬ್ಯಾಂಕಿಗೆ ಅಡಮಾನ ಮಾಡಿರುವ ಸ್ವತ್ತಿನ ಗೋಡೆಯ ಮೇಲೆ ನೋಟೀಸನ್ನು ಚುಟುಕಾಯಿಸಲಾಯಿತು. ಆದರೂ ಸಹ ಸಾಲ ವಸೂಲಿಯಾಗದ ಕಾರಣ ಫಾರಂ - 8 ಮತ್ತು 9ನ್ನು ಜಾರಿ ಮಾಡಿ ಆಸ್ತಿ ಹರಾಜಿಗೆ ನಿಯಮಾನುಸಾರ ಕ್ರಮ ವಹಿಸಿರುವುದಾಗಿ ತಿಳಿಸಿರುತ್ತಾರೆ. ಸದರಿ ಆಸ್ತಿಗೆ ಸಂಬಂಧಪಟ್ಟ ಇ.ಸಿ.ಯನ್ನು ಪಡೆದಿರುತ್ತಾರೆ. ಸದರಿ ನೋಟೀಸಿನ ಪ್ರತಿಗಳನ್ನು 30 ದಿನಗಳ ಮುಂಚಿತವಾಗಿ ಯಶವಂತಪುರ ವಿಭಾಗದ ಉಪನೋಂದಣಾಧಿಕಾರಿರವರ ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು ಕಛೇರಿಗಳಲ್ಲಿ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತ, ಬೆಂಗಳೂರು ಈ ಕಾರ್ಯಾಲಯದಲ್ಲಿ ಹಚ್ಚಿ ಮಾರಾಟ ದಿನಾಂಕವನ್ನು ಪ್ರಚಾರ ಮಾಡಿ, ಸದರಿ ಸ್ಥಿರ ಸ್ವತ್ತಿನ ಬಹಿರಂಗ ಹರಾಜು ನೋಟೀಸನ್ನು ದಿನಾಂಕ:14.01.2014ರಂದು ನಿಗಧಿ ಪಡಿಸಿದ ಹರಾಜಿಗೆ ಸದರಿ ಸಾಲಗಾರರ ಮನೆಯಲ್ಲಿ ಬಾಡಿಗೆದಾರರ-ಭೋಗ್ಯದಾರರ ಶ್ರೀ ಯು.ಎನ್.ಚಂದ್ರಚಾರ್ ಬಿನ್ ನೀಲಕಂಠಚಾರ್‌ರವರು ಓಎಸ್ ನಂ.25104/2014 ದಿನಾಂಕ: 23-01-2014ರಲ್ಲಿ ತಡೆಯಾಜ್ಞೆ ತಂದಿರುತ್ತಾರೆ. ಆದಕಾರಣ ನಿಗಧಿ ಪಡಿಸಿದ ಬಹಿರಂಗ ಹರಾಜನ್ನು ಕೋರ್ಟ್ ಆದೇಶದಂತೆ ತಾತ್ಕಾಲಿಕವಾಗಿ ಮುಂದೂಡಿರುವುದಾಗಿ ತಿಳಿಸಿರುತ್ತಾರೆ. ನಂತರವು ಸಾಲಗಾರರಿಂದ ಯಾವುದೇ ಪ್ರಕ್ರಿಯೆ ಬಾರದೇ ಇದ್ದ ಕಾರಣ ಸಾಲ ವಸೂಲಾತಿ ದೃಷ್ಟಿಯಿಂದ ಸ್ಥಿರಾಸ್ತಿಯನ್ನು ಮತ್ತೊಮ್ಮೆ ದಿನಾಂಕ:26-02-2015ರ ಶುಕ್ರವಾರ ಬೆಳಿಗ್ಗೆ 11-00 ಗಂಟೆಗೆ ಬಹಿರಂಗ ಹರಾಜು ನಡೆಸಲು ತೀರ್ಮಾನಿಸಿ, ಇದಕ್ಕೆ ಸಂಬಂಧಪಟ್ಟ ಫಾರಂ ನಂ.8&9ನ್ನು ದಿನಾಂಕ:16-01-2015 ರಂದು ಅಂಚೆ ಹಾಗೂ ಸ್ಪೀಡ್ ಪೋಸ್ಟ್ ಮೂಲಕ ಜಾರಿ ಮಾಡಲಾಗಿದ್ದು ಅದು ಸಹ ವಾಪಸ್ಸಾಗಿರುತ್ತದೆ. ಆದಕಾರಣ ದಿನಾಂಕ: 17-01-2015 ರಂದು ಫಾರಂ ನಂ.8&9 ಅನ್ನು ಬ್ಯಾಂಕಿಗೆ ಅಡಮಾನ ಮಾಡಿರುವ ಸ್ಥಿರಾಸ್ತಿಯ ಗೋಡೆಯ ಮೇಲೆ ಚುಟಕಾಯಿಸಿ ಫೋಟೋ ತೆಗೆದು ಜಾರಿಗೊಳಿಸಲಾಗಿದೆ. 30 ದಿನ ಮುಂಚಿತವಾಗಿ ಯಶವಂತಪುರ ವಿಭಾಗದ ಉಪ ನೋಂದಣಾಧಿಕಾರಿ ಕಛೇರಿ ಬೆಂಗಳೂರು ಉತ್ತರ ತಾಲ್ಲೂಕು ಮತ್ತು ಈ ಕಾರ್ಯಾಲಯದಲ್ಲಿ ಸೂಚಕ ಫಲಕದಲ್ಲಿ ಪ್ರಕಟಿಸುವುದಾಗಿ ತಿಳಿಸಿರುತ್ತಾರೆ. ದಿನಾಂಕ:19-02-2015ರ ಗುರುವಾರದಂದು ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರಕಟಿಸಿ ದಿನಾಂಕ:23-02-2015 ರಂದು ಸದರಿ ನೋಟೀಸ್ ಕರಪತ್ರಗಳನ್ನು ಮಾಡಿ ಮೂರು ದಿನಗಳ ಮುಂಚಿತವಾಗಿ ಸದರಿ ಬಡಾವಣೆಯಲ್ಲಿ ಮತ್ತು ಸುತ್ತಮುತ್ತಲಿನ ಬಡಾವಣೆಗಳಲ್ಲಿ ಮನೆ ಮನೆಗೂ ಹಂಚಿರುತ್ತಾರೆ. ದಿನಾಂಕ:26.02.2015 ಗುರುವಾರದಂದು ಬೆಳಿಗ್ಗೆ 11-00 ಗಂಟೆಗೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಪ್ರಧಾನ ಕಛೇರಿಯ 4ನೇ ಮಹಡಿಯಲ್ಲಿ ಹರಾಜು ಪ್ರಕ್ರಿಯೆ ಕೈಗೊಂಡಿದ್ದು, ಈ ಹರಾಜಿನಲ್ಲಿ ಬಿಡ್ಡುದಾರರು ಸಕ್ರಿಯವಾಗಿ ಭಾಗವಹಿಸಿದ್ದರು. ಅಂತಿಮ ಬಿಡ್ಡುದಾರರಾಗಿ ಶ್ರೀ ಅಶ್ವಥ್ ನಾರಾಯಣ ಗುಪ್ತರವರು ಹೆಚ್ಚಿನ ಬಿಡ್ಡುದಾರರಾಗಿದ್ದು ರೂ.40.00 ಲಕ್ಷಗಳಿಗೆ ಬಿಡ್ಡು ಮಾಡಿರುತ್ತಾರೆ. ಸರ್ಕಾರದಿಂದ ಅಂಗೀಕೃತಗೊಂಡಿರುವ ಮೌಲ್ಯಮಾಪನ ಸಂಸ್ಥೆಯಾಗಿರುವ ಮೆ: ನಿಶಾಂತ್ ಅಸೋಷಿಯೇಟ್ಸ್ ಎಂಬ ಕಂಪನಿಯಿಂದ ಮಾಡಿಸಿರುವ ಆಸ್ತಿ ಮೌಲ್ಯಮಾಪನ ಮಾರುಕಟ್ಟೆ ದರವು ರೂ.40,21,000/- ಗಳಾಗಿರುತ್ತದೆ ಮತ್ತು ಗೈಡ್‌ಲೈನ್ಸ್ ವ್ಯಾಲ್ಯೂ ರೂ.31,86,000/- ಗಳಾಗಿರುತ್ತದೆ. ದಿನಾಂಕ: 26-02-2015ರಂದು ನಡೆಸಿದ ಸಾರ್ವಜನಿಕ ಹರಾಜಿನಲ್ಲಿ ಒಟ್ಟು 7 ಜನ ಬಿಡ್ಡುದಾರರು ಭಾಗವಹಿಸಿದ್ದು, ಈ ಪೈಕಿ ಬಿಡ್ಡುದಾರರಾದ ಶ್ರೀ ಅಶ್ವಥ್ ನಾರಾಯಣ ಗುಪ್ತರವರು ರೂ.40,00,000/- ಗಳಿಗೆ (ರೂಪಾಯಿಗಳು ನಲವತ್ತು ಲಕ್ಷ ಮಾತ್ರ) ಬಿಡ್ಡು ಮಾಡಿ ಅತೀ ಹೆಚ್ಚಿನ ಬಿಡ್ಡುದಾರರಾದ ಪ್ರಯುಕ್ತ ಬ್ಯಾಂಕಿನ ಮಾರಾಟಾಧಿಕಾರಿಯವರು ಹರಾಜಿನ ಬಿಡ್ಡನ್ನು

ಶ್ರೀ ಅಶ್ವಥ್ ನಾರಾಯಣ ಗುಪ್ತರವರ ಹೆಸರಿಗೆ ನಿಲ್ಲಿಸಿರುತ್ತಾರೆ. ಉಳಿದ 6 ಜನ ಬಿಡ್ಡುದಾರರಿಗೆ ಆರಂಭಿಕ ಠೇವಣಿ ಮೊತ್ತ ರೂ. 1.00 ಲಕ್ಷಗಳನ್ನು ಹಿಂತಿರುಗಿಸಿ, ಸಹಿ ಪಡೆದಿರುವುದಾಗಿ ತಿಳಿಸಿರುತ್ತಾರೆ.

ಬಹಿರಂಗ ಹರಾಜಿನಲ್ಲಿ ಶ್ರೀ ವಿ.ರಾಘವೇಂದ್ರ ಬಿನ್ ವೆಂಕಟರಾಮಯ್ಯರವರ ಆಸ್ತಿಯನ್ನು ಶ್ರೀ ಅಶ್ವಥ್ ನಾರಾಯಣ ಗುಪ್ತ ರವರು ಬಿಡ್ ಮೊತ್ತವನ್ನು ಕಾಯ್ದೆ ನಿಯಮಾನುಸಾರ ಡಿಕ್ರಿದಾರ ಬ್ಯಾಂಕಿಗೆ ಪಾವತಿಸಿರುವುದಾಗಿ ಬ್ಯಾಂಕಿನ ಮಾರಾಟಾಧಿಕಾರಿಗಳು ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ. ಕಾಯ್ದೆ ನಿಯಮಾವಳಿಗಳ ಪ್ರಕಾರ ಸಾಲಗಾರರು ಅವರ ಸ್ಥಿರಾಸ್ತಿಯನ್ನು ಹರಾಜಾದ 30 ದಿನಗಳ ಒಳಗಾಗಿ ಬ್ಯಾಂಕಿಗೆ ಬರಬೇಕಾದ ಒಟ್ಟು ಮೊತ್ತವನ್ನು ಪಾವತಿಸಿ, ಆಸ್ತಿಯನ್ನು ಸಾಲಗಾರನೇ ಉಳಿಸಿಕೊಳ್ಳುವ ಅವಕಾಶವನ್ನು ನೀಡಿ, ದಿನಾಂಕ: 26–02–2015ರಂದು ಶ್ರೀ ವಿ. ರಾಘವೇಂದ್ರ ಬಿನ್ ವೆಂಕಟರಾಮಯ್ಯ ಹಾಗೂ ಜಾಮೀನುದಾರರಾದ ಶ್ರೀ ಧೀರಜ್ ಜೈನ್‌ರವರಿಗೆ ಆಸ್ತಿ ಹರಾಜಾದ ಬಗ್ಗೆ ಪತ್ರದ ಮುಖೇನ ತಿಳಿಸಿ, ಅವರು ನೀಡಿರುವ ವಿಳಾಸಕ್ಕೆ ನೋಂದಾಯಿತ ಅಂಚೆಯ ಮೂಲಕ ಕಳುಹಿಸಿರುವ ಲಕೋಟೆಯು ವಾಪಸ್ಸಾಗಿರುತ್ತದೆ. ಜಾಮೀನುದಾರರು ಅಂಚೆ ಪತ್ರವನ್ನು ಸ್ವೀಕರಿಸಿರುವುದಾಗಿ ತಿಳಿಸಿರುತ್ತಾರೆ. ಆದರೆ ಆಸ್ತಿಯು ಹರಾಜಾಗಿರುವ ಬಗ್ಗೆ ದಿನಾಂಕ:01–03–2015 ರಂದು ವಿಜಯಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರಕಟಿಸಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೇ ಬ್ಯಾಂಕಿಗೆ ಅಡಮಾನ ಮಾಡಿರುವ ಮನೆಗೆ ಮಾರಾಟಾಧಿಕಾರಿಗಳು ಖುದ್ದು ಭೇಟಿ ನೀಡಿ ಮನೆಯ ಗೋಡೆಯ ಮೇಲೆ ಪ್ರತಿಯನ್ನು ಅಂಟಿಸಿ ಫೋಟೋ ತೆಗೆಯಲಾಗಿರುವುದಾಗಿ ತಿಳಿಸಿರುತ್ತಾರೆ. ಆದಾಗ್ಯೂ ಸಹ ಸಾಲಗಾರನಿಂದ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ ಹಾಗೂ 30 ದಿನಗಳ ಕಾಲಾವಕಾಶ ಮುಗಿದಿರುವುದರಿಂದ ಶ್ರೀ ವಿ. ರಾಘವೇಂದ್ರ ಬಿನ್ ವೆಂಕಟರಾಮಯ್ಯರವರ ಆಸ್ತಿಯನ್ನು ಬಿಡ್ಡು ಮಾಡಿ ಯಶಸ್ವಿ ಬಿಡ್ಡುದಾರರಾದ ಶ್ರೀ ಅಶ್ವಥ್ ನಾರಾಯಣ ಗುಪ್ತರವರಿಗೆ ಬಿಡ್ಡುದಾರರಿಂದ ಬರಬೇಕಾದ ಸಂಪೂರ್ಣ ಹಣ ಪಾವತಿಯಾಗಿರುವುದರಿಂದ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ: 26–02–2015 ರಂದು ನಡೆಸಿದ ಸಾರ್ವಜನಿಕ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳನ್ನು ಪಾಲಿಸಿ ಹರಾಜು ನಡವಳಿಕೆಯನ್ನು ಮಾಡಿ ಶ್ರೀ ವಿ. ರಾಘವೇಂದ್ರ ಬಿನ್ ವೆಂಕಟರಾಮಯ್ಯರವರ ಅಡಮಾನ ಮಾಡಿದ ಸ್ಥಿರಾಸ್ತಿಯನ್ನು ಶ್ರೀ ಅಶ್ವಥ್ ನಾರಾಯಣ ಗುಪ್ತ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಸ್ಥಿರೀಕರಣ ಮಾಡಿಕೊಡಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ವರದಿ ಸಲ್ಲಿಸಿರುತ್ತಾರೆ.

ಈ ಕಾರ್ಯಾಲಯದ ಉಲ್ಲೇಖ (4) ರ ಪತ್ರದಲ್ಲಿ ಕೋರಿದ ಹೆಚ್ಚಿನ ಮಾಹಿತಿಯನ್ನು ಉಲ್ಲೇಖ (5) ರಲ್ಲಿ ಬ್ಯಾಂಕಿನ ಕಾರ್ಯದರ್ಶಿರವರು ನೀಡಿರುತ್ತಾರೆ. ಈ ಸ್ಥಿರಾಸ್ತಿಗೆ ಸಂಬಂಧಪಟ್ಟಂತೆ, ಮಾನ್ಯ ಕರ್ನಾಟಕ ಮೇಲ್ಮನವಿ ಪ್ರಾಧಿಕಾರದಲ್ಲಿ ಅಪೀಲು ಸಂಖ್ಯೆ:69/2015 ದಾಖಲಾಗಿದ್ದು, ಆದರೆ ಈ ದಿನಾಂಕಕ್ಕೆ ನ್ಯಾಯಾಲಯದಲ್ಲಿ ಯಾವುದೇ ತಡೆಯಾಜ್ಞೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ ಹಾಗೂ ನೋಂದಣಿ ಶುಲ್ಕಕ್ಕೆ ಸಂಬಂಧಿಸಿದ ಪಿ.ಓ ನಕಲು ಪ್ರತಿಗಳನ್ನು ಲಗತ್ತಿಸಿ, ಅಂಶಗಳನ್ನು ಪರಿಶೀಲಿಸಿ ಸದರಿ ಸ್ವತ್ತಿನ ಮಾರಾಟ ಸ್ಥಿರೀಕರಣವನ್ನು ಮಾಡಬೇಕೆಂದು ಕೋರಿರುತ್ತಾರೆ.

ದಿನಾಂಕ: 26–02–2015ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿಯ ಬಹಿರಂಗ ಹರಾಜಿನ ನಡವಳಿಕೆಯನ್ನು ಹಾಗೂ ತದನಂತರ ದಾಖಲಾತಿಗಳನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 7 ಜನ ಬಿಡ್‌ದಾರರು ಭಾಗವಹಿಸಿದ್ದು ಆ ಪೈಕಿ ಅತ್ಯಧಿಕ ಬಿಡ್‌ದಾರರಾದ ಶ್ರೀ ಅಶ್ವಥ್ ನಾರಾಯಣ ಗುಪ್ತ ಇವರಿಗೆ ರೂ. 40,00,000/– (ರೂಪಾಯಿಗಳು ನಲವತ್ತು ಲಕ್ಷ ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲಾತಿಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 45 ದಿನಗಳೊಳಗಾಗಿ ಬಿಡ್ ಮಾಡಿದ ಬಾಕಿ ಹಣ ಪೂರ್ತಿ ಬ್ಯಾಂಕಿಗೆ ಸಂದಾಯ ಮಾಡಿದ್ದು ಈ ಪೈಕಿ ಬಾಕಿದಾರರು ವಾದಿ ಬ್ಯಾಂಕಿಗೆ ಪಾವತಿಸಬೇಕಾದ ಬಾಕಿ ಸಾಲವನ್ನು ಮರು ಪಾವತಿ ಮಾಡದಿರುವುದರಿಂದ ಮತ್ತು ಈ ಬಗ್ಗೆ ಈ ಕಛೇರಿಗೆ ಯಾವುದೇ ಆಕ್ಷೇಪಣೆಗಳನ್ನು ಸಲ್ಲಿಸದೆ ಇರುವುದರಿಂದ ದಿನಾಂಕ: 26–02–2015ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಸ್ಥಿರಾಸ್ತಿ ಹರಾಜನ್ನು ಸ್ಥಿರೀಕರಣಗೊಳಿಸಬಹುದೆಂದು ಉಲ್ಲೇಖ (3) ಮತ್ತು (5) ರಂತೆ ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿರವರು ಕೈಗೊಂಡ ಕ್ರಮಗಳು ಕಾನೂನು ಬದ್ಧವಾಗಿದೆಯೆಂದು ಕಂಡು, ಹರಾಜನ್ನು ಸ್ಥಿರೀಕರಣಗೊಳಿಸುವುದು ನ್ಯಾಯ ಸಮ್ಮತವೆಂದು ಈ ನ್ಯಾಯಾಲಯವು ಮನಗೊಂಡು ಈ ಕೆಳಗಿನಂತೆ ಮಾರಾಟ ಸ್ಥಿರೀಕರಣ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ದೊಡ್ಡತಮ್ಮೇಗೌಡ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕೇಂದ್ರ ವಲಯ ವೃತ್ತ, ನಂ.32, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಲದ ಕಟ್ಟಡ, 2ನೇ ಮಹಡಿ, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು–01 ಆದ ನಾನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/139/ಸಿಎಲ್‌ಎಂ/2010 ದಿನಾಂಕ: 17–02–2011 ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38 (7)ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ–ಸಿ(45)ಸಿಇಪಿ/144/2012–13ರಲ್ಲಿನ ಸಾಲದ ಬಾಕಿ ವಸೂಲಾತಿಗಾಗಿ ಇಲ್ಲಿ ಶ್ರೀ ವಿ. ರಾಘವೇಂದ್ರ ಬಿನ್ ವೆಂಕಟರಾಮಯ್ಯರವರಿಗೆ ಸೇರಿದ ಈ ಆದೇಶದ ಷೆಡ್ಯೂಲ್‌ನಲ್ಲಿ ತಿಳಿಸಿರುವ ಸ್ಥಿರಾಸ್ತಿಯನ್ನು ದಿನಾಂಕ: 26–02–2015ರಂದು ವಾದಿ ಬ್ಯಾಂಕ್ ಮಾರಾಟಾಧಿಕಾರಿಯವರು ನಡೆಸಿರುವ ಬಹಿರಂಗ ಹರಾಜಿನಲ್ಲಿ ಶ್ರೀ ಅಶ್ವಥ್ ನಾರಾಯಣ ಗುಪ್ತ ನಂ.900, ಚೆಂಚುರಾಮಯ್ಯ ಬಿಲ್ಡಿಂಗ್, 2ನೇ ಕ್ರಾಸ್, 2ನೇ ಮೈನ್, ಎಂ.ಎಂ. ನಗರ, ಎಂ.ಇ.ಎಸ್ ರಸ್ತೆ, ಬೆಂಗಳೂರು–54. ಇವರು ಅತೀ ಹೆಚ್ಚಿನ ಬಿಡ್‌ದಾರರಾಗಿದ್ದು ಇವರಿಗೆ ರೂ. 40,00,000/– (ರೂಪಾಯಿಗಳು ನಲವತ್ತು ಲಕ್ಷ ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿದ್ದೇನೆ.

**ಸ್ಥಿರಾಸ್ತಿಯ ವಿವರ**

ಸ್ವತ್ತಿನ ಸಂಖ್ಯೆ:8/1 (ಪಿಐಡಿ ಸಂಖ್ಯೆ: 2–90–8/1) ಪೂರ್ವ ಭಾಗ, 12ನೇ ಮುಖ್ಯರಸ್ತೆ, ಎಸ್‌ಬಿಎಂ ಕಾಲೋನಿ ಬೃಂದಾವನ ನಗರ ಮತ್ತಿಕೆರೆ ಬಡಾವಣೆ, ಬೆಂಗಳೂರು–560054 ಸ್ವತ್ತಿನ ವಿಸ್ತೀರ್ಣ ಪೂರ್ವ ಪಶ್ಚಿಮ 20 ಅಡಿಗಳು ಉತ್ತರ ದಕ್ಷಿಣ 30 ಅಡಿಗಳು ಅಳತೆಯುಳ್ಳ ನಿವೇಶನಕ್ಕೆ ಚೆಕ್ಕು ಬಂದಿ.

| | | |
|---|---|---|
| **ಪೂರ್ವಕ್ಕೆ** | : | ವೆಂಕಟಪ್ಪರವರ ಸ್ವತ್ತು |
| **ಪಶ್ಚಿಮಕ್ಕೆ** | : | ಇದೇ ಸ್ವತ್ತಿನ ಉಳಿದ ಭಾಗ |
| **ಉತ್ತರಕ್ಕೆ** | : | ನಿವೇಶನ ಸಂಖ್ಯೆ: 11 |
| **ದಕ್ಷಿಣಕ್ಕೆ** | : | ರಸ್ತೆ. |

ಮಾರಾಟವಾದ ಮೊಬಲಗು ರೂ. 40,00,000/– ಗಳು

ಮಾರಾಟ ಮಾಡಿದ ದಿನಾಂಕ: 26–02–2015

ಮಾರಾಟದ ಹರಾಜು ಸ್ಥಿರೀಕರಣ ದಿನಾಂಕ: 27–05–2015

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:27–05–2015ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾಧಿಕಾರಿಗಳು ಕೇಂದ್ರ ವಲಯ ವೃತ್ತ
ರೇಸ್‌ಕೋರ್ಸ್ ರಸ್ತೆ, ಬೆಂಗಳೂರು ನಗರ ಜಿಲ್ಲೆ

**PR-784**
**SC-200**

## ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಸಂಖ್ಯೆ ಜಿಶಿ/ಕ್ರಷರ್/ಅಧಿಸೂಚನೆ 01/2015–16 ದಿನಾಂಕ: 20–04–2015**

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ತಲ್ಲೂರು ಮತ್ತು ಕೋಡಂಬಿ ಭದ್ರಾವತಿ ತಾಲ್ಲೂಕಿನ ದೊಡ್ಡೇರಿ ಮತ್ತು ಕೋಡಿಹಳ್ಳಿ ಶಿವಮೊಗ್ಗ ತಾಲ್ಲೂಕಿನ ಗಜ್ಜೇನಹಳ್ಳಿ, ಕಲ್ಲಗಂಗೂರು, ಹುಣಸೋಡು ಹಾಗೂ ಬಸವನಗಂಗೂರು ಗ್ರಾಮಗಳ ವ್ಯಾಪ್ತಿಯಲ್ಲಿ ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ (ಕ್ರಷರಗಳ) ನಿಯಂತ್ರಣ ಕಾಯ್ದೆ ಹಾಗೂ ನಿಯಮಾವಳಿ 2013 ಹಾಗೂ ತಿದ್ದುಪಡಿ ನಿಯಮಾವಳಿ 2014ರ ಅಡಿಯಲ್ಲಿ ಸುರಕ್ಷಿತ ವಲಯಗಳಿಗಾಗಿ ಉದ್ದೇಶಿಸಿರುವ ಪ್ರದೇಶಗಳು.

ಈ ಕೆಳಕಂಡ ಪಟ್ಟಿಯಲ್ಲಿರುವ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ತಲ್ಲೂರು ಮತ್ತು ಕೋಡಂಬಿ ಭದ್ರಾವತಿ ತಾಲ್ಲೂಕಿನ ದೊಡ್ಡೇರಿ ಮತ್ತು ಕೋಡಿಹಳ್ಳಿ ಶಿವಮೊಗ್ಗ ತಾಲ್ಲೂಕಿನ ಗೆಜ್ಜೇನಹಳ್ಳಿ, ಕಲ್ಲಗಂಗೂರು, ಹುಣಸೋಡು ಹಾಗೂ ಬಸವನಗಂಗೂರು ಗ್ರಾಮಗಳ ಖಾಸಗಿ ಜಮೀನಿನಲ್ಲಿ ಕಲ್ಲುಪುಡಿ ಮಾಡುವ ಘಟಕಗಳನ್ನು ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ ತಿದ್ದುಪಡಿ ನಿಯಮಾವಳಿ–2013 ಮತ್ತು 2014 ರಂತೆ, ಶಿವಮೊಗ್ಗ ಜಿಲ್ಲೆಯಲ್ಲಿ ಸುರಕ್ಷಿತ ವಲಯಗಳನ್ನು ಸ್ಥಾಪಿಸಲು ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣ ಪ್ರಾಧಿಕಾರದ ತೀರ್ಮಾನದಂತೆ ಅಧಿಸೂಚನೆಗಾಗಿ ಕ್ರಮ ಕೈಗೊಳ್ಳಲಾಗಿದೆ.

**ಅನುಮೋದನೆಗೊಂಡ ಸುರಕ್ಷಿತ ವಲಯಗಳ ಪಟ್ಟಿ ಈ ಕೆಳಗಿನಂತಿವೆ.**

| ಕ್ರಮ ಸಂ. | ಜಿಲ್ಲೆ | ತಾಲ್ಲೂಕು | ಗ್ರಾಮದ ಹೆಸರು | ಸ.ನಂ. | ಜಮೀನಿನ ತರಹೆ | ವಿಸ್ತೀರ್ಣ ಎಕರೆ |
|---|---|---|---|---|---|---|
| 1 | ಶಿವಮೊಗ್ಗ | ಸೊರಬ | ತಲ್ಲೂರು | 193 | ಖಾಸಗಿ | 1.00 |
| 2 | ಶಿವಮೊಗ್ಗ | ಸೊರಬ | ಕೋಡಂಬಿ | 49/1 ಮತ್ತು 2 | ಖಾಸಗಿ | 3.00 |
| 3 | ಶಿವಮೊಗ್ಗ | ಭದ್ರಾವತಿ | ದೊಡ್ಡೇರಿ | 07 | ಖಾಸಗಿ | 1.20 |
| 4 | ಶಿವಮೊಗ್ಗ | ಭದ್ರಾವತಿ | ಕೋಡಿಹಳ್ಳಿ | 15 | ಖಾಸಗಿ | 1.00 |
| 5 | ಶಿವಮೊಗ್ಗ | ಶಿವಮೊಗ್ಗ | ಗೆಜ್ಜೇನಹಳ್ಳಿ | 94/1, 65, 137 | ಖಾಸಗಿ | 5.33 |
| 6 | ಶಿವಮೊಗ್ಗ | ಶಿವಮೊಗ್ಗ | ಕಲ್ಲಗಂಗೂರು | 10/1, 10/9, 10/8, 10/10 10/5, 10/6, 10/7, 10/2, 09, 13, 05/86 | ಖಾಸಗಿ | 17.16 |
| 7 | ಶಿವಮೊಗ್ಗ | ಶಿವಮೊಗ್ಗ | ಹುಣಸೋಡು | 81 | ಖಾಸಗಿ | 5.03 |
| 8 | ಶಿವಮೊಗ್ಗ | ಶಿವಮೊಗ್ಗ | ಬಸವನಗಂಗೂರು | 138/3 | ಖಾಸಗಿ | 2.00 |

**ವಿಶೇಷ ಸೂಚನೆ :**

1) ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಪ್ರಾಧಿಕಾರವು ಮುಂದೆ ಕೈಗೊಳ್ಳಬಹುದಾದ ತೀರ್ಮಾನದ ಷರತ್ತಿಗೊಳಪಟ್ಟಿರುತ್ತದೆ.

ಜಿಲ್ಲಾಧಿಕಾರಿಗಳು
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**PR-785**

## COMMERCIAL TAXES DEPARTMENT

### OFFICE OF THE COMMISSIONER OF COMMERCIAL TAXES (KARNATAKA), BENGALURU.

**Present:** RITVIK PANDEY, IAS,
Commissioner of Commercial Taxes.
(Karnataka) Bengaluru.

**Sub:** KTEG Act.1979 - Clarification on tax rate applicable on " HDPE Woven Fabrics ” and "HD PE Woven Sacks"-Reg.

**Ref:** Letter dated 22-04-2015 of Anjaneya Traders, Bengaluru-79.

1. The applicant-M/s Anjaneya Traders, No. 27, Ground Floor, 4th G Cross, Kamakshi Palya, Bengaluru-79 (TIN: 29121232913) has sought clarification on the rate of Entry tax applicable to the following goods :-
   i) HDPE/PP Woven Fabrics.
   ii) HDPE/PP Woven Sacks.

2. The matter is examined.

   i) By Notification NO FD 11 CET 2002(I) dated 30.03.2002, among other goods, Textiles is liable to Entry tax at 1%. The description of the commodity in SI.No.4 of the said Notification is as under:-

   " (4) Textiles, namely, Cotton, Woollen or Silk or Artificial Silk including rayon or nylon and other man-made or synthetic fabrics manufactured in mills or power looms and hosiery cloth in length; and including fabrics coated with or impregnated with PVC or cellulose derivatives (whether or not manufactured in mills or power looms) "

   ii) The word "Textiles” is not defined under the KTEG Act,1979 or KVAT Act,2003 or KST Act,1957. "Textiles” is generally understood as any' Woven fabrics' of any material have in warp and woof pattern. When yarn whether cotton, silk, woollen, rayon, nylon or any other description or made out of any other material is woven into fabric, what comes into being is a "Textiles" and it is known as such. The method of weaving adopted may be warp and woof pattern or may be any other process or technique. This issue is deliberated by the Apex Court in Porrit and Spencer's case (42 STC 433). While analysing the meaning of Textiles, the Hon'ble Supreme Court has further elaborated the concept of Textiles as under:-

   "The word “Textiles" must be interpreted according to its popular Sense, meaning that sense which people conversant with the subject matter with which the statute is dealing would attribute to it. That word has only one meaning, namely, a woven fabric, and that is the meaning which it bears in ordinary parlance.

   When yarn, whether cotton, silk, woollen, rayon, nylon or of any other description or made out of any other material is woven into a fabric, what comes into being is a " Textile" and it is known as such. The method of weaving adopted may be the warp and woof pattern, as is generally the case in most of the Textiles, or it may be any other process or technique. What is necessary is no more than weaving of yarn and weaving would mean binding or putting together by some process so as to form a fabric. Moreover a Textile need not be of any particular size, strength or weight. It may be bleached or dyed. The use to which it may be put is also immaterial and does not bear on its character as a Textile. It can be used for even industrial purposes.

   The concept of "Textiles " is not a static concept. It has having regard to newly developing materials, methods and techniques and process, a continually expanding content may legitimately, without doing any violence to the language be regarded as "Textiles".

3. HDPE Fabric is produced by using granules, processing them to produce sheets which are then cut and strips are woven by weft and warp to create HDPE Fabric. The division bench of the Hon'ble High Court of Madras in the case of State of Tamil Nadu v. M/s.Polyweb Private Limited (1982) 51 STC 364 held as under:-

   "Artificial silk is not a mere synonym for rayon. The two are not just inter-changeable expressions. Artificial silk must be regarded as the genus of which rayon is a species. The modern appellation for artificial silk would seem to be man - made fibre. Therefore it is proper to include within the scope of the expression artificial silk, any silk-like substance, which is not natural silk. All that is necessary is that artificial silk, like natural silk, must be a fibre. Accordingly, High density polyethylene must be regarded as falling within the generic term artificial silk and fabrics made out of high density polyethylene, either wholly or in part, whether they are hundred percent pure or not, qualify for exemption as goods falling within the description artificial silk fabrics set out in item 4 of the Third Schedule to the Tamil Nadu General Sales Tax Act,1959.

   In the understanding of an expression, Courts will not be doing violence to the principles of statutory construction it they pay regard to how such an expression is understood not only by the trade or by high technology in general, but also by the concerned department of Governments, part of whose task is to put a correct interpretation on the expression in question for the purpose of running their departments.

4. The Division bench of the Punjab and Haryana High Court at Chandigarh, was saddled with the question whether ”HDPE/PP Woven fabric" falls within the ambit of entry 51 of Scheduled B of Haryana VAT Act,2003, in the case of M/s A.R . Plastic Pvt Limited -Vs- State of Haryana in VAT AP No.134 of 2013.

   Entry 51 of Schedule B of the Haryana VAT Act,2003, is in two parts. The first part deals with all varieties of cotton, woollen or silken textiles including artificial silk or nylon. Therefore all varieties of textiles may be cotton, woollen or silken

including rayon, artificial silk or nylon fall with him entry 51 of Schedule B. The second part excludes certain categories on which additional excise duty in live of Sales Tax is not levied. In this case, it is first part of entry 51 which was relevant.

The division bench of the Punjab and Haryana High Court delivered judgement on 14.05.2014, relying on the judgement of Hon'ble High Court of Madras in M/s Polyweb Private Limited case (51 STC 364) and Apex Court decision in the case of M/s Porritts & Spencer (Asia) Limited, (42 STC 433) holding that HDPE Woven fabrics fall within the entry 51 of Schedule B of Haryana VAT Act,2003.

5. "HDPE/LDPE/PP Woven Sacks " are packing materials as has been held in the case of Lingaraj Poly Sacks v. Additional Entry Tax Officer and another (1998) 109 STC 516 (Karnataka). Packing materials are not notified under section 3(1) of the KTEG Act,1979 for levy of Entry tax. Consequently no Entry tax is leviable on HDPE/LDPE/PP woven sacks.

6. In the light of the above discussion the following clarification is issued.

**ORDER NO. KTEG/CLR/CR-01/2015-16 DATED 22.07.2015**

It is clarified that

i) "HDPE/LDPE/PP Woven fabric" falls within ambit of description of goods in SI.No.4 of Notification NO FD 11 CET 2002(1) dated 30.03.2002 and hence liable to Entry tax at 1%.

ii) "HDPE/LDPE/PP Woven sacks" do not attract Entry Tax.

**RITVIK PANDEY**
Commissioner of Commercial Taxes,
(Karnataka), Bengaluru.

**PR-781**
**SC-25**

## COMMERCIAL TAXES DEPARTMENT

### OFFICE OF THE COMMISSIONER OF COMMERCIAL TAXES (KARNATAKA), BENGALURU.

**Present:** RITVIK PANDEY, IAS,
Commissioner of Commercial Taxes.
(Karnataka) Bengaluru.

**Sub:** KVAT Act,2003 - Clarification u/s 59(4)on tax rate applicable to "Self Adhesive Vinyl" - reg.

**Ref:** Letter dated 02-01-2015 of Bhavani Enterprises, Bengaluru..

**Preamble:**

1. The applicant- M/s. Bhavani Enterprises,No.15,Telecom Layout, New Timberyard Layout, Near Mysore Road, Bengaluru-560026 has sought Clarification on the rate of tax applicable to "Self- adhesive Vinyl" quoting the CET Tariff Item NO.3919 90 90.

2. The matter is examined.

i) In SI. No. 143 of the Notification No. FD 197 CSL 2005(6) dated:30-04-2005, issued under Section 4 read with Entry 51 of Third Schedule to the KVAT Act,2003, the following description of the commodities have been notified as Industrial input and packing materials.

| Sl. No | Heading and sub-heading No. | Description |
|---|---|---|
| 143 | - | Self-adhesive plates, sheets, film, strip of plastics |
| | 3919.10.00 | 1) In rolls of width not exceeding 20cm |
| | 3919.90.10 | 2) Plastic stickers, whether or not printed, embossed, and or impregnated. |
| | 3919.90.20 | 3) Cellulose adhesive tape. |
| | 3919.90.90 | 4) Others |

ii) The description of goods in Tariff item No.3907 of Chapter 39 of the Central Excise Tariff Act,1985 reads as under:-

| Tariff Item | Description of goods | Unit | Rate of Duty |
|---|---|---|---|
| **3919** | **Self Adhesive plates, sheets, film, foil, tape, strip and other flat shapes, of plastics whether or not in rolls** | | |
| 3919 10 00 | In rolls of width not exceeding 20 cm | Kg. | 12% |
| 3919 90 | Other | | |
| 3919 90 10 | Plastic stickers, whether or not printed, or impregnated | Kg. | 12% |
| 3919 90 20 | Celluylose adhesive tape | Kg. | 12% |
| 3919 90 90 | Other | Kg. | 12% |

3. The Interpretation Rules as prescribed by explanations to Notification No. FD 197 CSL 2005(6) dated 30th April, 2005 are as under:

**" Explanations:** (1) The Rules for the interpretation of the Central excise Tariff Act, 1985 read with the Explanatory Notes as updated from time to time published by the Customs Co-operation Council, Brussels apply for the interpretation of this notification.

(2) Where any commodities are described against any heading or, as the case may be, sub-heading, and the aforesaid description is different in any manner from the corresponding description in the Central Excise Tariff Act, 1985, then only those commodities described as aforesaid will be covered by the scope of this notification and other commodities though covered by the corresponding description in the Central Excise Tariff will not be covered by the scope of this notification.

(3) Subject to explanation 2, for the purpose of any entry contained in this Notification, where the description against any heading or, as the case may be, sub-heading, matches fully with the corresponding description in the Central Excise Tariff, then all the commodities covered for the purposes of the said tariff under that heading or sub-heading will be covered by the scope of this notification.

(4) Where the description against any heading or sub-heading is shown as "other" then the interpretation as provided in Explanation 2 shall apply"

4. The commodity" Self- Adhesive Vinyl" claimed to be falling under the CET Tariff No.3919 90 90 does not find its mention either in the Notification dated 30.04.2005 issued under the KVAT Act,2003 or in the CET Tariff Item No.3919 90 90 of Chapter 39 of the Central Excise Tariff Act,1985. Therefore the above rules are not applicable. Further, the commodities namely, "Self- Adhesive plates, Sheets, Film, Strip of Plastic" appearing in both the Table above are different from "Self-Adhesive vinyl". Hence Self-Adhesive Vinyl is not a notified input so as to be eligible for lower rate of tax under the KVAT Act,2003.

5. In the light of the above discussion the following clarification is issued.

**CLARIFICATION NO.CR.136/2014-15 DATED 27.07.2015**

It is clarified that "Self-Adhesive Vinyl" is an unscheduled goods liable to tax at the rate of 14.5% with effect from 01.08.2012 and onwards under section 4(l)(b)(iii) of KVAT Act, 2003.

**RITVIK PANDEY**
Commissioner of Commercial Taxes,
(Karnataka), Bengaluru.

**PR-782**
**SC-25**

**ನಿರ್ದೇಶಕರ ಕಛೇರಿ ವಿಕಲಚೇತನರ ಹಾಗೂ ಹಿರಿಯನಾಗರಿಕರ ಸಬಲೀಕರಣ ಇಲಾಖೆ,**
**ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ ಬೆಂಗಳೂರು–560001**

**ವಿಷಯ** : ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ವಿಶೇಷ ಶಾಲೆಗಳ ಅಧೀಕ್ಷಕರು ಹಾಗೂ ಪ್ರಧಾನ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರು (ಸಮೂಹ 'ಬಿ') ವೃಂದದ ಅಧಿಕಾರಿಗಳ ದಿನಾಂಕ: 01–01–2009 ರಂದಿನಂತಿನ ಸಂಯುಕ್ತ ಅಂತಿಮ ಜೇಷ್ಠತಾ ಪಟ್ಟಿ ಹೊರಡಿಸುವ ಬಗ್ಗೆ.

**ಉಲ್ಲೇಖ :**

1. ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಲ್ 174/ಪಿಹೆಚ್ಪಿ/86 ದಿ: 12–07—1988
2. ಸರ್ಕಾರದ ಆದೇಶ ಸಂ: ಡಿ.ಪಿ.ಎ.ಆರ್/101/ಎಸ್.ಆರ್.ಡಿ/98(ಪಿ) ದಿ: 01–04–2004
3. ಸರ್ಕಾರದ ಆದೇಶ ಸಂ:ಮ ಮ ಇ/442/ಎಸ್ ಜೆ ಡಿ 2004 ದಿ: 01–01–2008
4. ಸರ್ಕಾರದ ಅಧಿಸೂಚನೆ ಸಂ: ಮ ಮ ಇ 397/ಎಸ್ ಜೆ ಡಿ 2008 ದಿ: 06–08–2009
5. ಸರ್ಕಾರದ ಪತ್ರ ಸಂಖ್ಯೆ: ಮ ಮ ಇ 558 ಎಸ್ ಜೆ ಡಿ 2011 ದಿ: 03–02–2012
6. ಈ ಕಛೇರಿ ಆದೇಶ ಸಂಖ್ಯೆ: ನಿಅಕ ಇ:ಸಿಬ್ಬಂದಿ: ಜೇಷ್ಠ/2009–10/11–12: ದಿ: 03–03–2012
7. ಸರ್ಕಾರದ ಪತ್ರ ಸಂಖ್ಯೆ ಮಮ ಇ 194 ಎಸ್ ಜೆ ಡಿ 2012; ದಿ: 12–10–2012
8. ಸರ್ಕಾರದ ಪತ್ರ ಸಂಖ್ಯೆ: ಮಮ ಇ 194 ಎಸ್ ಜೆ ಡಿ 2012 ದಿ: 12–02–2013
9. ಈ ಕಛೇರಿ ಆದೇಶ ಸಂಖ್ಯೆ: ನಿಅಕ ಇ:ಸಿಬ್ಬಂದಿ: ಜೇಷ್ಠ/2009–10/11–12: ದಿ: 19–10–2013
10. ಶ್ರೀ ಎಸ್.ಸಿ. ಚೆನ್ನಯ್ಯ ಸಹಾಯಕ ನಿರ್ದೇಶಕರು ಇವರ ಆಕ್ಷೇಪಣೆ ಪತ್ರ ದಿ: 10–11–2013
11. ಈ ಕಛೇರಿ ಪತ್ರ ಸಂಖ್ಯೆ: ವಿಹಿನಾಸ ಇ/ಸಿಬ್ಬಂದಿ/09–10/1130 ದಿ: 12–06–2014
12. ಸರ್ಕಾರದ ಪತ್ರ ಸಂಖ್ಯೆ: ಮಮ ಇ 534 ಎಸ್ ಜೆ ಡಿ 2014 ದಿ: 11–08–2015

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯನ್ನು ಬೇರ್ಪಡಿಸಿ ಆದೇಶ ಹೊರಡಿಸಲಾಗಿದೆ. ಅಲ್ಲದೆ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಅಡಿಯಲ್ಲಿ ಬರುವ ಸಂಸ್ಥೆಗಳ/ಕಛೇರಿಗಳ ವಿವರ ಹಾಗೂ ಹುದ್ದೆಗಳನ್ನು ಗುರುತಿಸಿದ್ದು, ಉಲ್ಲೇಖಿತ ಆದೇಶದಲ್ಲಿ ಸದರಿ ಹುದ್ದೆಗಳನ್ನು ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಗೆ ವರ್ಗಾಯಿಸಲಾಗಿದೆ.

ಸಿಬ್ಬಂದಿಯವರ ವಿಲೀನ ಪ್ರಕ್ರಿಯೆ ಪೂರ್ಣಗೊಳ್ಳದ ಕಾರಣ ತಾತ್ಕಾಲಿಕವಾಗಿ ಮಹಿಳಾ ಮತ್ತು ಮಕ್ಕಳ ಇಲಾಖಾ ಸಿಬ್ಬಂದಿಯವರನ್ನೇ ನಿಯೋಜನೆ ಮೇಲೆ ಮುಂದುವರೆಸಲಾಗಿತ್ತು. ಓದಲಾದ ಕ್ರಮಾಂಕ (2) ರಲ್ಲಿ ತಿಳಿಸಿರುವ ಸರ್ಕಾರದ ಆದೇಶದಲ್ಲಿ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಗೆ ಪ್ರತ್ಯೇಕ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಸೃಜಿಸಿ ಜಾರಿಗೆ ತರಲಾಗಿದೆ. ಉಲ್ಲೇಖ (3)ರಲ್ಲಿ ತಿಳಿಸಿರುವ ಆದೇಶದಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅಧಿಕಾರಿ/ಸಿಬ್ಬಂದಿಯವರಿಂದ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಲ್ಲಿ ವಿಲೀನ ಹೊಂದುವ ಬಗ್ಗೆ ಅಭಿಮತವನ್ನು ಆಹ್ವಾನಿಸಿ ನಿಯಮಾನುಸಾರ ಪರಿಶೀಲಿಸಿ ಒಟ್ಟು 71 ಜನ ಅಧಿಕಾರಿ/ಸಿಬ್ಬಂದಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಶಾಶ್ವತವಾಗಿ ವರ್ಗಾವಣೆ ಮಾಡಿ. ವರ್ಗಾವಣೆ ಪಟ್ಟಿಯನ್ನು ಬಿಡುಗಡೆಗೊಳಿಸಲಾಗಿದೆ. ಈ ಎಲ್ಲಾ 71 ಜನ ಅಧಿಕಾರಿ/ಸಿಬ್ಬಂದಿಗಳಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ಕರ್ತವ್ಯದಿಂದ ಬಿಡುಗಡೆ ಹೊಂದಿ ನಿಯಮಾನುಸಾರ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯಲ್ಲಿ ವರದಿ ಮಾಡಿಕೊಂಡು ಸ್ಥಳ ನಿಯುಕ್ತಿ ಹೊಂದಲು ಆದೇಶಿಸಲಾಗಿರುತ್ತದೆ. ಅದರಂತೆ ಸದರಿ 71 ಅಧಿಕಾರಿ/ಸಿಬ್ಬಂದಿಗಳಲ್ಲಿ ಶ್ರೀ ಅಂಜನಪ್ಪ ಅಧೀಕ್ಷಕರು ದರ್ಜೆ–2 ಹಾಗೂ ಶ್ರೀ ಗೋಪಾಲಸ್ವಾಮಿ ದ್ವಿತೀಯ ದರ್ಜೆ ಸಹಾಯಕರುಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಅಧಿಕಾರಿ/ಸಿಬ್ಬಂದಿಗಳು ಬೇರೆ ಬೇರೆ ದಿನಾಂಕಗಳಂದು ಈ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (4)ರ ಸರ್ಕಾರದ ಅಧಿಸೂಚನೆಯಲ್ಲಿ ದಿನಾಂಕ: 01–01–2009 ರಲ್ಲಿ ಇರುವಂತೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳ, ವಿಶೇಷ ಶಾಲೆಗಳ ಅಧೀಕ್ಷಕರುಗಳು, ಕಛೇರಿ ವ್ಯವಸ್ಥಾಪಕರು (ಪತ್ರಾಂಕಿತ), ಸರ್ಕಾರಿ ಬ್ರೈಲ್ ಮುದ್ರಣಾಲಯದ ಅಧೀಕ್ಷಕರುಗಳ ಸಂಯುಕ್ತ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ, ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ನಿಗದಿಯಾಗಿರುವ ಸ್ಥಾನ, ಅರ್ಹತಾ ದಿನಾಂಕ ಹಾಗೂ ನಮೂದಿಸಲ್ಪಟ್ಟಿರುವ ಇನ್ನಿತರ ಸೇವಾ ವಿಷಯಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ದಾಖಲೆ ಮುಖಾಂತರ ಆಕ್ಷೇಪಣೆಯನ್ನು ಸಲ್ಲಿಸಲು ಸೂಚಿಸಿ ಪ್ರಕಟಿಸಿರುತ್ತಾರೆ. ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಬಂದಂತಹ ಆಕ್ಷೇಪಣೆಗಳನ್ನು ಸರಿಪಡಿಸಿ, ದಿನಾಂಕ: 01–01–2009 ರಂದಿನಂತಿನ ಸಂಯುಕ್ತ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿನ ಅನುಬಂಧದ ತ:ಖ್ತೆ ಕ್ರಮ ಸಂಖ್ಯೆ 2 ರಲ್ಲಿನ ಶ್ರೀ ಬಿ.ಬಿ.ಪುರದಾಳ್ ಇವರ ನಂತರ ಮತ್ತು ಜೇಷ್ಠತೆಯಲ್ಲಿ ಕಿರಿಯವರಾದ ಕ್ರಮ ಸಂಖ್ಯೆ 3ರಲ್ಲಿನ ಶ್ರೀ ಎಸ್. ಶ್ರೀರಾಮುಲು ಇವರ ಜೇಷ್ಠತಾ ಕ್ರಮ ಸಂಖ್ಯೆಯ ಮೊದಲು, ಕ್ರಮ ಸಂಖ್ಯೆ 2 'ಎ' ರಲ್ಲಿ ಶ್ರೀಮತಿ ಹೆಚ್. ಮಾನಸದೇವಿ ಇವರ ಜೇಷ್ಠತಾ ಕ್ರಮ ಸಂಖ್ಯೆಯನ್ನು ಅಳವಡಿಸಿ ದಿನಾಂಕ: 20–05–1993 ರಂತೆ ಜೇಷ್ಠತಾ ಅರ್ಹತೆಯನ್ನು ಕರ್ನಾಟಕ ನಾಗರಿಕ ಸೇವಾ (ಆರ್ ಪಿ ಪಿ) 1973 ರ ಕಲಂ 4 ರನ್ವಯ ನಿಗದಿಪಡಿಸಿ ಅಧಿಸೂಚನೆ ಹೊರಡಿಸಿ ಇಲಾಖಾ ಹಂತದಲ್ಲಿಯೇ ಜೇಷ್ಠತಾ ಪಟ್ಟಿಯನ್ನು ಹೊರಡಿಸುವಂತೆ ಮೇಲೆ ಓದಲಾದ ಕ್ರಮಾಂಕ (5) ರ ಸರ್ಕಾರದ ಪತ್ರದಲ್ಲಿ ಸೂಚಿಸಿರುತ್ತಾರೆ. ಅದರಂತೆ ಮೇಲೆ ಓದಲಾದ ಕ್ರಮಾಂಕ (6)ರಲ್ಲಿ ಸರ್ಕಾರದ ನಿರ್ದೇಶನದಂತೆ ಶ್ರೀಮತಿ ಹೆಚ್.ಮಾನಸದೇವಿಯವರಿಗೆ ದಿನಾಂಕ: 06–08–2009 ರ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿನ ಕ್ರಮಾಂಕ (2)ರ ಶ್ರೀ ಬಿ.ಬಿ.ಪುರದಾಳ್ ಇವರ ಜೇಷ್ಠತೆಗಿಂತ ನಂತರ ಹಾಗೂ ಜೇಷ್ಠತಾ ಕ್ರಮಾಂಕ (3) ರಲ್ಲಿರುವ ಶ್ರೀ ಎಸ್. ಶ್ರೀರಾಮುಲು ಇವರ ಜೇಷ್ಠತೆಗಿಂತ ಮೊದಲು ಅಂದರೆ 2ಎ ರಲ್ಲಿ ಜೇಷ್ಠತೆಯನ್ನು ನಿಗದಿಪಡಿಸಿ ಕ್ರಮಾಂಕ (6)ರಲ್ಲಿ ಆದೇಶ ಹೊರಡಿಸಲಾಗಿತ್ತು.

ಆದರೆ ದಿನಾಂಕ: 03–03–2012 ರಂದು ಹೊರಡಿಸಲಾದ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ವಿಶೇಷ ಶಾಲೆಗಳ ಅಧೀಕ್ಷಕರು ಹಾಗೂ ಪ್ರಧಾನ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರು, ಸರ್ಕಾರಿ ಬ್ರೈಲ್ ಮುದ್ರಣಾಲಯದ ಅಧೀಕ್ಷಕರುಗಳ (ಸಮೂಹ ಬಿ) ವೃಂದದ ಅಧಿಕಾರಿಗಳ ದಿನಾಂಕ: 01–01–2009 ರಂದಿನಂತಿನ ಸಂಯುಕ್ತ ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ 2(ಎ) ರಲ್ಲಿ ನಮೂದಿಸಿರುವ ಶ್ರೀಮತಿ ಹೆಚ್. ಮಾನಸದೇವಿ ಇವರಿಗೆ ಕಲಂ (6) ರಲ್ಲಿ ಪ್ರಾಪ್ತಗೊಳಿಸಿರುವ ನೈಜವಾದ ಜೇಷ್ಠತಾರ್ಹತಾ ದಿನಾಂಕದ ಕಲಂನ ನಂತರದ ಷರಾ ಕಲಂನಲ್ಲಿ ನಮೂದಿಸಿರುವುದನ್ನು "**ಸರ್ಕಾರದ ಅಧಿಸೂಚನೆ ಸಂಖ್ಯೆ ಮಮಇ 558 ಎಸ್‌ಜೆಡಿ 2011 ದಿನಾಂಕ: 02–02–2012 ರನ್ವಯ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ಆರ್ ಪಿ ಪಿ ಪಿ) ಕಾಯ್ದೆ 1973 ರ ಕಲಂ 4 ರನ್ವಯ ಅರ್ಹತಾ ದಿನಾಂಕವನ್ನು ನಿಗದಿಪಡಿಸಲಾಗಿದೆ.**" ಎಂದು ಮಾರ್ಪಾಡಿಸುವಂತೆ ಮೇಲೆ ಓದಲಾದ ಕ್ರಮಾಂಕ (7) ಮತ್ತು (8) ರ ಸರ್ಕಾರದ ಪತ್ರದಲ್ಲಿ ನಿರ್ದೇಶನ ನೀಡಿರುತ್ತಾರೆ. ಆದ್ದರಿಂದ ಮೇಲೆ ಓದಲಾದ ಕ್ರಮಾಂಕ (6) ರಲ್ಲಿ ಹೊರಡಿಸಲಾದ ದಿನಾಂಕ: 01–01–2009 ರಂದಂತಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ವಿಶೇಷ ಶಾಲೆಗಳ ಅಧೀಕ್ಷಕರು ಹಾಗೂ ಪ್ರಧಾನ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರು, ಸರ್ಕಾರಿ ಬ್ರೈಲ್ ಮುದ್ರಣಾಲಯದ ಅಧೀಕ್ಷಕರುಗಳ (ಸಮೂಹ ಬಿ) ವೃಂದದ ಅಧಿಕಾರಿಗಳ ದಿನಾಂಕ: 01–01–2009 ರಂದಿನಂತಿನ ಸಂಯುಕ್ತ ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಅನುಬಂಧದ ಷರಾ ಕಲಂನಲ್ಲಿ **ದಿನಾಂಕ: 11–11–2011ರ ಸರ್ಕಾರದ ಆದೇಶದಂತೆ ಶಾಶ್ವತಾ ವರ್ಗಾವಣೆಯ ದಿನಾಂಕದಿಂದ ಜೇಷ್ಠತೆಯನ್ನು ನಿಗದಿಪಡಿಸಿದೆ ಎಂದು ನಮೂದಿಸಲಾಗಿರುತ್ತದೆ. ಆದರೆ ಸದರಿ ಜೇಷ್ಠತಾ ಪಟ್ಟಿಯು ದಿನಾಂಕ: 01–01–2009ಕ್ಕೆ ಅನ್ವಯಿಸುವುದರಿಂದ ದಿನಾಂಕ: 11–11–2011ರ ಆದೇಶವನ್ನು ಜಾರಿಗೊಳಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಮೇಲೆ ಓದಲಾದ ಕ್ರಮಾಂಕ (6) ರಲ್ಲಿ ಅನುಬಂಧದ ಷರಾ ಕಲಂನಲ್ಲಿ ದಿನಾಂಕ: 11–11–2011ರ ಆದೇಶದಂತೆ ಶಾಶ್ವತಾ ವರ್ಗಾವಣೆಯ ದಿನಾಂಕದಿಂದ ಜೇಷ್ಠತೆಯನ್ನು ನಿಗದಿಪಡಿಸಿದೆ ಎಂದಿರುವುದನ್ನು ಹಿಂಪಡೆದು** ಕ್ರಮಾಂಕ (8)ರಲ್ಲಿನ ಸರ್ಕಾರದ ನಿರ್ದೇಶನದಂತೆ ತಿದ್ದುಪಡಿ ಮಾಡಿ, ತಾತ್ಕಾಲಿಕ ಕರಡು ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ನಿರ್ಧರಿಸಲಾಗಿರುತ್ತದೆ. ಅದರಂತೆ ಕ್ರಮಾಂಕ (9) ರಲ್ಲಿನ ಈ ಕಛೇರಿಯ ಆದೇಶದಲ್ಲಿ **ದಿನಾಂಕ: 01–01–2009 ರಂದಿನಂತಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ವಿಶೇಷ ಶಾಲೆಗಳ ಅಧೀಕ್ಷಕರು, ಪ್ರಧಾನ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರುಗಳು, ಸರ್ಕಾರಿ ಬ್ರೈಲ್ ಮುದ್ರಣಾಲಯದ ಅಧೀಕ್ಷಕರು (ಸಮೂಹ ಬಿ) ವೃಂದದ ಅಧಿಕಾರಿಗಳ ದಿನಾಂಕ: 01–01–2009 ರಂದಿನಂತಿನ ಸಂಯುಕ್ತ ತಾತ್ಕಾಲಿಕಾ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಸದರಿ ಪಟ್ಟಿಯಲ್ಲಿ ನಿಗದಿಯಾಗಿರುವ ಷರಾಗೆ ಆಕ್ಷೇಪಣೆಗಳಿದ್ದಲ್ಲಿ ಅಂತಹವರು ತಮ್ಮ ನಿಲುವನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಲಿಖಿತ ಮೂಲಕ ಆದೇಶ ಪ್ರಕಟಿಸಿದ 30 ದಿನದೊಳಗಾಗಿ ಸಲ್ಲಿಸಬೇಕೆಂದು ಸೂಚಿಸಲಾಗಿತ್ತು.**

ಮೇಲೆ ತಿಳಿಸಿದಂತೆ ಈ ಕಛೇರಿಯ ಕ್ರಮಾಂಕ (9) ರಲ್ಲಿ ಇಲಾಖೆಯ ಗ್ರೂಪ್ ಬಿ ವೃಂದದ ಜೇಷ್ಠತಾ ಪಟ್ಟಿಯಲ್ಲಿನ ಅನುಬಂಧದ ಷರಾ ಕಲಂಗೆ ಸಂಬಂಧಿಸಿದಂತೆ ಕರೆದಂತಹ ಆಕ್ಷೇಪಣೆಗೆ ಸದರಿ ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ (1) ರಲ್ಲಿರುವ ಶ್ರೀ ಎಸ್.ಸಿ. ಚನ್ನಯ್ಯ, ಹಿಂದಿನ ಸಹಾಯಕ ನಿರ್ದೇಶಕರು ತಮ್ಮ ಆಕ್ಷೇಪಣೆಯನ್ನು ಉಲ್ಲೇಖಿತ ಕ್ರಮಾಂಕ (10)ರಂತೆ ಸಲ್ಲಿಸಿದ್ದು, ಈ ಬಗ್ಗೆ ಮೇಲಿನ ಕ್ರಮಾಂಕ (11)ರ ಈ ಕಛೇರಿಯ ಪತ್ರದಲ್ಲಿ ಸರ್ಕಾರದ ಸ್ಪಷ್ಟೀಕರಣ ಕೋರಲಾಗಿತ್ತು. ಮೇಲಿನ ಕ್ರಮಾಂಕ (12)ರ ಸರ್ಕಾರದ ಪತ್ರದಲ್ಲಿ ಈ ಕೆಳಗಿನಂತೆ ನಿರ್ದೇಶನ ನೀಡಿರುತ್ತಾರೆ.

"ನಿರ್ದೇಶಕರ ಕಛೇರಿ ಪತ್ರ ದಿನಾಂಕ: 12–06–2014ರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆರ್.ಪಿ.ಪಿ.ಪಿ. ಕಾಯ್ದೆ 1973ರ ಪ್ರಕಾರ ಮುಂಬಡ್ತಿ ನೀಡುವ ಪ್ರಕರಣಗಳಿಗೆ ಕರ್ನಾಟಕ ಲೋಕಸೇವಾ ಆಯೋಗದ ಸಮಾಲೋಚನಾ ವಿನಿಯಮ 1976ರ ನಿಯಮ 3(ಡಿ)ರನ್ವಯ ಆಯೋಗದೊಂದಿಗೆ ಸಮಾಲೋಚಿಸುವ ಅಗತ್ಯವಿರುವುದಿಲ್ಲ.

ಶ್ರೀ ಚನ್ನಯ್ಯರವರು ತಾತ್ಕಾಲಿಕಾ ಜೇಷ್ಠತಾ ಪಟ್ಟಿಗೆ ಸಲ್ಲಿಸಿರುವ ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿದೆ. ಹಾಲಿ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಚನ್ನಯ್ಯ, ಅಂದಿನ ಸಹಾಯಕ ನಿರ್ದೇಶಕರುರವರು ಶ್ರೀಮತಿ ಮಾನಸದೇವಿರವರಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿರುವುದರಿಂದ ಅವರಿಗೆ ತಾತ್ಕಾಲಿಕ ಜೇಷ್ಠತಾ ಪಟ್ಟಿಯಿಂದ ಯಾವುದೇ ರೀತಿಯ ಧಕ್ಕೆ ಉಂಟಾಗಿರುವುದಿಲ್ಲ. ಶ್ರೀಮತಿ ಮಾನಸದೇವಿರವರಿಗೆ ಮುಂಬಡ್ತಿ ನೀಡಬಾರದೆಂಬ ಅವರ ಮನವಿಯು ಪರಿಗಣನೆಗೆ ಅರ್ಹವಲ್ಲವಾದ್ದರಿಂದ ಅವರ ಆಕ್ಷೇಪಣೆಯನ್ನು ಕೈಬಿಡಲು ಸೂಚಿಸಿದೆ.

ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಆದೇಶ ಸಂಖ್ಯೆ:ನಿಅಕಇ/ಸಿಬ್ಬಂದಿ/ಜೇಷ್ಠ/2009-10/11-12/4922 ದಿನಾಂಕ 19/10/2013ರಲ್ಲಿ ಪ್ರಕಟಿಸಿರುವ ಇಲಾಖೆಯ ಸಂಯುಕ್ತ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು (ದಿನಾಂಕ: 01-01-2009ರಲ್ಲಿದ್ದಂತೆ) ಅಂತಿಮಗೊಳಿಸಿ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರ ಪ್ರತಿಯನ್ನು ಜರೂರಾಗಿ ಸರ್ಕಾರಕ್ಕೆ ಕಳುಹಿಸುವಂತೆ ನಿರ್ದೇಶಿಸುತ್ತಾರೆ."

ದಿನಾಂಕ: 03-03-2012ರಂದು ಹೊರಡಿಸಿದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಸರ್ಕಾರದ ನಿರ್ದೇಶನದಂತೆ **ದಿನಾಂಕ: 01-01-2009ರಂದಿನಂತಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ವಿಶೇಷ ಶಾಲೆಗಳ ಅಧೀಕ್ಷಕರು, ಪ್ರಧಾನ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರು, ಸರ್ಕಾರಿ ಬ್ರೈಲ್ ಮುದ್ರಣಾಲಯದ ಅಧೀಕ್ಷಕರು (ಸಮೂಹ ಬಿ) ವೃಂದದ ಸಂಯುಕ್ತ ಜೇಷ್ಠತಾ ಪಟ್ಟಿಯಲ್ಲಿ ಅಳವಡಿಸಿ ಅಂತಿಮಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.**

**ಆದೇಶ**

**ಸಂಖ್ಯೆ:ನಿಅಕಇ/ಸಿಬ್ಬಂದಿ/ಜೇಷ್ಠ/2009-10/2010-12/15-16, 1817 ದಿನಾಂಕ: 26-08-2015**

ಪ್ರಸ್ತಾವನೆಯಲ್ಲಿ ತಿಳಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ನಾಗರಿಕ ಸೇವೆ (ಜೇಷ್ಠತೆ) ನಿಯಮಾವಳಿಗಳು 1957ರಂತೆ **ದಿನಾಂಕ: 01-01-2009 ರಂದಂತಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ವಿಶೇಷ ಶಾಲೆಗಳ ಅಧೀಕ್ಷಕರು, ಪ್ರಧಾನ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರುಗಳು, ಸರ್ಕಾರಿ ಬ್ರೈಲ್ ಮುದ್ರಣಾಲಯದ ಅಧೀಕ್ಷಕರು (ಸಮೂಹ ಬಿ) ವೃಂದದ ಸಂಯುಕ್ತ ಜೇಷ್ಠತಾ ಪಟ್ಟಿಯಲ್ಲಿ ಶ್ರೀಮತಿ ಹೆಚ್. ಮಾನಸದೇವಿ ಇವರಿಗೆ "ಸರ್ಕಾರದ ಅಧಿಸೂಚನೆ ಅಧಿಸೂಚನೆ ಸಂಖ್ಯೆ: ಮಮಇ 558 ಎಸ್‌ಜೆಡಿ 2011 ದಿನಾಂಕ: 02-02-2012 ರನ್ವಯ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ (ಆರ್ ಪಿ ಪಿ ಪಿ) ಕಾಯ್ದೆ 1973 ರ ಕಲಂ 4 ರಂತೆ ಅರ್ಹತಾ ದಿನಾಂಕವನ್ನು ನಿಗದಿಪಡಿಸಿ" ಇಲಾಖೆಯ ಸಮೂಹ "ಬಿ" ವೃಂದದ ಅಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಅನುಬಂಧ -1 ರಲ್ಲಿ ಪ್ರಕಟಿಸಿ ಆದೇಶಿಸಿದೆ.**

ನಿರ್ದೇಶಕರು,
ವಿಕಲಚೇತನರ ಹಾಗೂ ಹಿರಿಯನಾಗರಿಕರ
ಸಬಲೀಕರಣ ಇಲಾಖೆ ಬೆಂಗಳೂರು

**ಅನುಬಂಧ-1**

**ಸಂಖ್ಯೆ:ನಿಅಕಇ:ಸಿಬ್ಬಂದಿ:ಜೇಷ್ಠ/2009-10/2010-11/15-16 ದಿನಾಂಕ: 26-08-2015**

**ವಿಕಲಚೇತನರ ಹಾಗೂ ಹಿರಿಯನಾಗರಿಕರ ಸಬಲೀಕರಣ ಇಲಾಖೆಯ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ವಿಶೇಷ ಶಾಲೆಗಳ ಅಧೀಕ್ಷಕರು ಹಾಗೂ ಪ್ರಧಾನ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರು, (ಸಮೂಹ ಬಿ) ವೃಂದದ ಅಧಿಕಾರಿಗಳ ದಿನಾಂಕ: 01-01-2009 ರಂದಿನಂತಿನ ಸಂಯುಕ್ತ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ ಸಂ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ/ ನೇಮಕಾತಿ ಹೊಂದಿದ ದಿನಾಂಕ | ನೇಮಕಾತಿಗೆ /ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಎಸ್.ಸಿ.ಚನ್ನಯ್ಯ | ಮುಂಬಡ್ತಿ | 10.12.1954 | 28.08.1981 | 26.03.1987 | 26.03.1987 | |
| 2 | ಬಿ.ಬಿ.ಪುರದಾಳ್ | ಮುಂಬಡ್ತಿ | 26.01.1952 | 08.09.1977 | 20.05.1993 | 20.05.1993 | |
| 2ಎ | ಹೆಚ್.ಮಾನಸದೇವಿ | ಮುಂಬಡ್ತಿ | 07.03.1956 | 31.01.1985 | 20.05.1993 | 20.05.1993 | **ಸರ್ಕಾರದ ಅಧಿಸೂಚನೆ ಸಂಖ್ಯೆ ಮಮಇ 558 ಎಸ್‌ಜೆಡಿ 2011 ದಿನಾಂಕ: 02-02-2012** ರನ್ವಯ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ (ಆರ್ ಪಿ ಪಿ ಪಿ)ಕಾಯ್ದೆ 1973ರ ಕಲಂ 4 ರನ್ವಯ ಹಾಗೂ ಕರ್ನಾಟಕ ಲೋಕಸೇವಾ ಆಯೋಗದ ಮೂಲ ನೇಮಕಾತಿ ಪಟ್ಟಿಯಲ್ಲಿನ ಕ್ರಮಸಂಖ್ಯೆಯನ್ವಯ ಅರ್ಹತಾ ದಿನಾಂಕವನ್ನು ನಿಗದಿಪಡಿಸಲಾಗಿದೆ. |
| 3 | ಎಸ್.ಶ್ರೀರಾಮುಲು | ಮುಂಬಡ್ತಿ | 21.05.1953 | 21.05.1953 | 20.05.1993 | 20.05.1993 | |
| 4 | ಎ.ಬಿ.ಹಿರೇಮಠ್ | ಮುಂಬಡ್ತಿ | 12.01.1955 | 23.08.1976 | 10.08.1999 | 10.08.1999 | |
| 5 | ಎನ್. ಲಕ್ಷ್ಮಿದೇವಿ | ಮುಂಬಡ್ತಿ | 07.03.1954 | 02.07.1987 | 10.08.1999 | 10.08.1999 | |

ನಿರ್ದೇಶಕರು,
ವಿಕಲಚೇತನರ ಹಾಗೂ ಹಿರಿಯನಾಗರಿಕರ
ಸಬಲೀಕರಣ ಇಲಾಖೆ ಬೆಂಗಳೂರು

P.R. 830

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**(ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ)**

**ಹೆಚ್ಚುವರಿ ಅಧಿಸೂಚನೆ**

**ಸಂಖ್ಯೆ: ಲೋಇ 112 ಇಎಪಿ 2012(ಪಿ1) ದಿನಾಂಕ: 29-07-2015**

ಕರ್ನಾಟಕ ಹೆದ್ದಾರಿ ಕಾಯ್ದೆ 1964 ಕಲಂ 15 ರ ಮೇರೆಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಜಮೀನುಗಳು ಬಿ.ಆರ್.ಟಿ.ಎಸ್. ಯೋಜನೆಗಾಗಿ ಧಾರವಾಡ ಶಹರದಲ್ಲಿ ಬಿ.ಆರ್.ಟಿ.ಎಸ್ ಬಸ್ ನಿಲ್ದಾಣ (Terminal) ನಿರ್ಮಿಸುವ ಉದ್ದೇಶಕ್ಕಾಗಿ ಮುಖ್ಯ ಅಭಿಯಂತರರು, ಕೆಆರ್‌ಡಿಸಿಎಲ್, ಬೆಂಗಳೂರು (ರಾಜ್ಯ ಹೆದ್ದಾರಿ ಪ್ರಾಧಿಕಾರ) ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಜಮೀನುಗಳು ಬಿ.ಆರ್.ಟಿ.ಎಸ್ ಬಸ್ ನಿಲ್ದಾಣ (Terminal) ನಿರ್ಮಿಸಲು ಅವಶ್ಯವಾಗಿವೆ ಎಂದು ಸರ್ಕಾರವು ಮನಗಂಡಿದೆ. ಆದುದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಜಮೀನುಗಳು ಬಿ.ಆರ್.ಟಿ.ಎಸ್ ಬಸ್ ನಿಲ್ದಾಣ (Terminal) ನಿರ್ಮಿಸಲು ಅವಶ್ಯಕವಾಗಿವೆ ಎಂದು ಈ ಮೂಲಕ ಘೋಷಿಸಲಾಗಿದೆ. ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964 ರ ಅಡಿಯಲ್ಲಿ ಈ ಕೆಳಕಂಡ ಜಮೀನುಗಳಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿ, ಸಿಬ್ಬಂದಿ ಅಥವಾ ಮುಖ್ಯ ಅಭಿಯಂತರರು, ಕೆಆರ್‌ಡಿಸಿಎಲ್, ಬೆಂಗಳೂರು (ರಾಜ್ಯ ಹೆದ್ದಾರಿ ಪ್ರಾಧಿಕಾರ) ಪರವಾಗಿ ಪ್ರತಿನಿಧಿಸುವವರನ್ನು ತಡೆಯುವುದಾಗಲಿ ಅಥವಾ ಅಡ್ಡಿಪಡಿಸುವುದಾಗಲಿ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾದ ನಂತರ ಮುಖ್ಯ ಅಭಿಯಂತರರು, ಕೆಆರ್‌ಡಿಸಿಎಲ್, ಬೆಂಗಳೂರು (ರಾಜ್ಯ ಹೆದ್ದಾರಿ ಪ್ರಾಧಿಕಾರ) ರವರ ಅನುಮತಿಯಿಲ್ಲದೇ ಸದರಿ ಜಮೀನುಗಳನ್ನು ವಿಲೆ ಮಾಡುವ ಒಪ್ಪಂದದ ಕ್ರಯ, ಕರಾರು, ಭೋಗ್ಯ, ಲೀಜ್, ಅದಲು ಬದಲು ವಗೈರೆ ಮಾಡುವಂತಿಲ್ಲ. ಸದರಿ ಜಮೀನುಗಳಲ್ಲಿ ಈ ಅಧಿಸೂಚನೆ ಪ್ರಕಟಣೆಯ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದ್ದರೂ ಪರಿಹಾರ ಹಣ ನಿಗದಿ ಮಾಡುವಾಗ ಅಂತಹ ವ್ಯವಹಾರದ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಸದರಿ ಜಮೀನುಗಳ ವಿವರಗಳನ್ನು ಪರಿಶೀಲನೆಗಾಗಿ ವಿಶೇಷ ಭೂಸ್ವಾಧೀನ ಅಧಿಕಾರಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ರಾಯಾಪುರ ಧಾರವಾಡ ಮತ್ತು ಕಾರ್ಯಪಾಲಕ ಇಂಜಿನಿಯರ್ ಕೆಆರ್‌ಡಿಸಿಎಲ್, ಯೋಜನಾ ಕಛೇರಿ ಹುಬ್ಬಳ್ಳಿ ಮತ್ತು ಧಾರವಾಡ ತಹಶೀಲ್ದಾರ್‌ರವರ ಕಛೇರಿಯಲ್ಲಿ ಇಡಲಾಗಿದೆ.

| ಅ. ಸಂ. | ಖಾತೆದಾರರ ಹೆಸರು (ಪ್ರಾಪರ್ಟಿ ಕಾರ್ಡ ಪ್ರಕಾರ) | ಸಿ.ಟಿ.ಎಸ್. ನಂ. | ಪ್ರಾಪರ್ಟಿ ಕಾರ್ಡ ಪ್ರಕಾರ ಜಮೀನಿನ ಒಟ್ಟು ವಿಸ್ತೀರ್ಣ (ಚ. ಮೀ.) | ತರಹೆ (ಶೇತ್ಕಿ/ಬಿನ್‌ಶೇತ್ಕಿ/ವಸತಿ/ವಾಣಿಜ್ಯ) | ಆಕಾರ | | ಭೂ ಸ್ವಾಧೀನಕ್ಕೆ ಒಳಪಡುವ ಕ್ಷೇತ್ರ ( ಚ. ಮೀ.) | ಚಕಬಂದಿ | | | | ಶರಾ |
|---|---|---|---|---|---|---|---|---|---|---|---|---|
| | | | | | ರೂ. | ಪೈ | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| **1** | **2** | **3** | | **4** | **6** | **7** | **5** | **8** | **9** | **10** | **11** | **12** |
| **ಗ್ರಾಮ : ಧಾರವಾಡ ಶಹರ** | | | | | | | **ಜಿಲ್ಲೆ: ಧಾರವಾಡ** | | | | | |
| 1 | ಮೂಲ ಹಕ್ಕು: ಕರ್ನಾಟಕ ಸರ್ಕಾರ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ ಹಾಗೂ ಪಾಲಿಕೆಯ ಜಾಗೆಯಲ್ಲಿ ಪೈಕಿ ಜಾಗೆಯ ಭೂ ಬಾಡೇದಾರ : ಮಿತ್ರ ಸಮಾಜ | 161ಎ | 3540.15 | ಖುಷ್ಕಿ | 13.00 | 0 | 2357.25 | ರಸ್ತೆ | ಉಳಿದ ಜಾಗೆ | ರಸ್ತೆ | ರಸ್ತೆ | |
| 2 | ಮೂಲ ಹಕ್ಕು: ಕರ್ನಾಟಕ ಸರ್ಕಾರ ಭೂ ಬಾಡೇದಾರ : 1) ವಿಲಾಸ, 2) ಪ್ರಮೋದ, | 161 ಬಿ | 146.32 | ಖುಷ್ಕಿ | - | - | 146.32 | ರಸ್ತೆ ಹಾಗೂ ಸಿ.ಟಿ.ಎಸ್. | ಸಿ.ಟಿ.ಎಸ್. ನಂ. 161/ಎ | ರಸ್ತೆ | ಸಿ.ಟಿ.ಎಸ್. ನಂ. 161/ಎ | |

| ಅ. ಸಂ. | ಖಾತೆದಾರರ ಹೆಸರು (ಪ್ರಾಪರ್ಟಿ ಕಾರ್ಡ ಪ್ರಕಾರ) | ಸಿ.ಟಿ.ಎಸ್. ನಂ. | ಪ್ರಾಪರ್ಟಿ ಕಾರ್ಡ ಪ್ರಕಾರ ಜಮೀನಿನ ಒಟ್ಟು ವಿಸ್ತೀರ್ಣ (ಚ. ಮೀ.) | ತರಹೆ (ಶೇತ್ಕಿ/ಬಿನ್‌ಶೇತ್ಕಿ/ವಸತಿ/ವಾಣಿಜ್ಯ) | ಆಕಾರ | | ಭೂ ಸ್ವಾಧೀನಕ್ಕೆ ಒಳಪಡುವ ಕ್ಷೇತ್ರ ( ಚ. ಮೀ.) | ಚಕಬಂದಿ | | | | ಶರಾ |
|---|---|---|---|---|---|---|---|---|---|---|---|---|
| | | | | | ರೂ. | ಪೈ | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| **1** | **2** | **3** | | **4** | **6** | **7** | **5** | **8** | **9** | **10** | **11** | **12** |
| | 3) ಅಜಿತ್ ತಂದೆ ತುಕಾರಾಮ ಗಾಂವಕರ್ | | | | | | | ನಂ. 161/ಎ | | | | |
| | ಒಟ್ಟು | | **3686.47** | | | | **2503.57** | | | | | |

## ಕರ್ನಾಟಕ ಹೆದ್ದಾರಿ ಕಾಯ್ದೆ 1964 ಕಲಂ 15ರ ಕೆಳಗೆ

## ಘೋಷ್ವಾರೆ

| ಅ.ನಂ. | ಗ್ರಾಮ/ನಗರ | ತಾಲ್ಲೂಕು | ಜಿಲ್ಲೆ | ಭೂಸ್ವಾಧೀನಕ್ಕೊಳಪಡುವ ಕ್ಷೇತ್ರ (ಚ.ಮೀ.ಗಳಲ್ಲಿ) |
|---|---|---|---|---|
| 1 | ಧಾರವಾಡ ಶಹರ | ಧಾರವಾಡ | ಧಾರವಾಡ | 2503.57 |
| ಒಟ್ಟು ಕ್ಷೇತ್ರ | | | | **2503.57** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇಂ. ವಿಜಯ್. ಭೀ. ಚಂದಾಪುರ,**
ಸರ್ಕಾರದ ಅಧೀನ ಕಾರ್ಯದರ್ಶಿ
ಬಾಹ್ಯ ಅನುದಾನಿತ ಯೋಜನೆಗಳು (EAP)
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲ ಸಾರಿಗೆ ಇಲಾಖೆ

PR - 783
SC - 200

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ ಕಲಂ 28(4)ರಡಿ ಅಧಿಸೂಚನೆ**

**ಸಂಖ್ಯೆ: ಸಿಐ 74 ಎಸ್‌ಪಿಕ್ಯೂ 2015 ಬೆಂಗಳೂರು, ದಿನಾಂಕ: 24-07-2015**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (ಕರ್ನಾಟಕ ಕಾಯ್ದೆ 1966) (ಈ ಮುಂದೆ ಪ್ರಸ್ತುತ ಕಾಯ್ದೆ ಎಂದು ಹೇಳಲಾಗಿದೆ) ಕಲಂ 28(1)ರನ್ವಯ ವಿಹಿತವಾದ ಅಧಿಕಾರದಡಿ ಅಧಿಸೂಚನೆ ಸಂಖ್ಯೆ: ಸಿಐ 512 ಎಸ್‌ಪಿಕ್ಯೂ 2012, ದಿನಾಂಕ: 09-05-2013 ( ಈ ಮುಂದೆ ಅಧಿಸೂಚನೆ ಎಂದು ಹೇಳಲಾಗಿದೆ) ರಂದು ಹೊರಡಿಸಿ, ದಿನಾಂಕ: 10-05-2013ರಂದು ಪ್ರಕಟವಾದ ರಾಜ್ಯಪತ್ರದ ಭಾಗ-3ರ ಪುಟ 1ರಿಂದ 04ವರೆಗೆ ಕರ್ನಾಟಕ ಸರ್ಕಾರವು ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಬಾಗಲಕೋಟೆ ಜಿಲ್ಲೆ, ಬದಾಮಿ ತಾಲ್ಲೂಕು, ಕೋಟೆಕಲ್ಲ ಗ್ರಾಮದಲ್ಲಿ ಮೆ॥ ಕೆ.ಎನ್.ಕೆ. ಕಾರ್ಪೊರೇಷನ್ ಪ್ರೈ. ಲಿಮಿಟೆಡ್ ಇವರಿಗಾಗಿ 1.2 MTPA Pellet Plant and Stainless Steel with Co-Generation of Power-35 ಸ್ಥಾಪಿಸುವ ಸಲುವಾಗಿ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಲು ತನ್ನ ಉದ್ದೇಶವನ್ನು ಪ್ರಕಟಿಸಿತ್ತು.

ಅದರಂತೆ ಪ್ರಸ್ತುತ ಕಾಯ್ದೆಯನ್ವಯ 28ರ ಉಪ ಕಲಂ (3)ರನ್ವಯ ಆದೇಶವನ್ನು ಹೊರಡಿಸಲಾಗಿದೆ ಮತ್ತು ಈ ಕೆಳಗೆ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಪ್ರಸ್ತುತ ಅಧಿಸೂಚನೆಯಲ್ಲಿಯೂ ಕಾಣಿಸಲ್ಪಟ್ಟಿವೆ ಹಾಗೂ ಪ್ರಸ್ತುತ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳಬೇಕೆಂದು ಕರ್ನಾಟಕ ಸರ್ಕಾರಕ್ಕೆ ಮನವರಿಕೆಯಾಗಿದೆ. ಆದುದರಿಂದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (ಕರ್ನಾಟಕ ಕಾಯ್ದೆ 18:1966)ರ ಕಲಂ 28ರ ಉಪ ಕಲಂ (4)ರನ್ವಯ ನಿಹಿತವಾಗಿರುವ ಅಧಿಕಾರದ ಮೇರೆಗೆ ಅಧಿಸೂಚನೆಯಲ್ಲಿ ಕಾಣಿಸಿರುವ ಉದ್ದೇಶಕ್ಕಾಗಿ ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಈ ಮೂಲಕ ಕರ್ನಾಟಕ ಸರ್ಕಾರವು ಘೋಷಿಸಿದೆ.

**ಅನುಸೂಚಿ**

**ಜಿಲ್ಲೆ : ಬಾಗಲಕೋಟೆ** **ತಾಲ್ಲೂಕು : ಬಾದಾಮಿ** **ಹೋಬಳಿ: ಗುಳೇದಗುಡ್ಡ** **ಗ್ರಾಮ : ಕೋಟಿಕಲ್ಲ**

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ರಿ.ಸ. ನಂಬರ್ | ಸ್ವಾಧೀನಪಡಿಸುವ ಅಂದಾಜು ವಿಸ್ತೀರ್ಣ (ಎ–ಗುಂ) | ಆಕಾರ ರೂ – ಪೈ | ಜಮೀನಿನ ತರಹೆ | ಚೆಕ್ಕುಬಂದಿ (ಚತುಃಸೀಮೆ) | | | |
|---|---|---|---|---|---|---|---|---|---|---|
| | | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಹನಮಪ್ಪ ಸುಗದ ಮಲ್ಲಪ್ಪ | ಸ್ವಂತ | 100 ಕ | 04–00 | 06–36 | ಖುಷ್ಕಿ | 100/ ಅ | 100/ಅ ಉಳಿದ ಭಾಗ | 100ಅ ಉಳಿದ ಭಾಗ ಹಾಗೂ ಶಿರೂರ ಗ್ರಾಮ ಹದ್ದು | 100/ಅ ಉಳಿದ ಭಾಗ |
| | | | ಒಟ್ಟು | **04–00** | | | | | | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಮಹಾದೇವ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**PR - 780**

**SC - 50**

## ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

## (ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ)

## ಹೆಚ್ಚುವರಿ ಅಧಿಸೂಚನೆ

**ಸಂಖ್ಯೆ: ಲೋಇ/148/ಇಎಪಿ/2011, ಬೆಂಗಳೂರು ದಿನಾಂಕ: 06–08–2015.**

ಕರ್ನಾಟಕ ಹೆದ್ದಾರಿ ಕಾಯ್ದೆ 1964 ಕಲಂ 15ರ ಮೇರೆಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನುಗಳು ಹುಣಸನಹಳ್ಳಿ–ಚಿಕ್ಕಹಳ್ಳಿ ರಾಜ್ಯ ಹೆದ್ದಾರಿ 3ರ (ಲಿಂಕ್ ಸಂಖ್ಯೆ: 64–ಎಫ್) ಕೊರಟಗೆರೆಯಿಂದ ಮಧುಗಿರಿ ವರೆಗೆ ರಸ್ತೆ ಅಭಿವೃದ್ಧಿಪಡಿಸುವ ಉದ್ದೇಶಕ್ಕಾಗಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ: 3ನ್ನು ಅಭಿವೃದ್ಧಿಪಡಿಸಲು ಅವಶ್ಯವಾಗಿದೆ ಎಂದು ಸರ್ಕಾರವು ಮನಗಂಡಿದೆ. ಆದುದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ: 3 ರ ರಸ್ತೆ ಅಭಿವೃದ್ಧಿಗೆ ಅವಶ್ಯವಾಗಿದೆ ಎಂದು ಈ ಮೂಲಕ ಘೋಷಿಸಲಾಗಿದೆ. ಕರ್ನಾಟಕ ಹೆದ್ದಾರಿ ಕಾಯ್ದೆ 1964 ರ ಅಡಿಯಲ್ಲಿ ಈ ಕೆಳಕಂಡ ಜಮೀನುಗಳಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿ, ಸಿಬ್ಬಂದಿ ಅಥವಾ ಯೋಜನಾ ನಿರ್ದೇಶಕರ ಪರವಾಗಿ ಪ್ರತಿನಿಧಿಸುವವರನ್ನು ತಡೆಯುವುದಾಗಲಿ ಅಥವಾ ಅಡ್ಡಿ ಪಡಿಸುವುದಾಗಲಿ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾದ ನಂತರ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರ ಅನುಮತಿಯಿಲ್ಲದೆ ಸದರಿ ಜಮೀನುಗಳನ್ನು ವಿಲೇ ಮಾಡುವ ಒಪ್ಪಂದದ ಕ್ರಯ, ಕರಾರು, ಭೋಗ್ಯ, ಲೀಜ್, ಅದಲು–ಬದಲು ವಗೈರೆ ಮಾಡುವಂತಿಲ್ಲ. ಸದರಿ ಜಮೀನುಗಳಲ್ಲಿ ಈ ಅಧಿಸೂಚನೆ ಪ್ರಕಟಣೆ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದ್ದರೂ ಪರಿಹಾರ ಹಣ ನಿಗದಿ ಮಾಡುವಾಗ ಅಂತಹ ವ್ಯವಹಾರದ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಸದರಿ ಜಮೀನುಗಳ ವಿವರಗಳನ್ನು ಪರಿಶೀಲನೆಗಾಗಿ ವಿಶೇಷ ಜಿಲ್ಲಾಧಿಕಾರಿಗಳು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು, ಸಹಾಯಕ ಆಯುಕ್ತರು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು, ಮತ್ತು ಸಂಬಂಧಪಟ್ಟ ತಹಶೀಲ್ದಾರ್‌ರವರ ಕಚೇರಿಯಲ್ಲಿ ಇಡಲಾಗಿದೆ.

**–: ಷೆಡ್ಯೂಲ್ :–**

| ಕ್ರ. ಸಂ. | ಪಹಣಿಯಂತೆ ಖಾತೆದಾರರ ಹೆಸರು ಶ್ರೀಯುತರು/ಶ್ರೀಮತಿ | ಜಮೀನಿನ ವಿವರ | | | | | ಆಕಾರ | ಭೂಸ್ವಾಧೀನಕ್ಕೆ ಒಳಪಡುವ ವಿಸ್ತೀರ್ಣ | | | ಆಕಾರ | ಚಕ್ಕುಬಂದಿ | | | | ಪಹಣಿಯಂತೆ ಒಟ್ಟು ವಿಸ್ತೀರ್ಣ ಎ–ಗು |
|---|---|---|---|---|---|---|---|---|---|---|---|---|---|---|---|---|
| | | ಸ.ನಂ. | ತರಹೆ | ಆಕಾರ ಬಂದಿನಂತೆ ಒಟ್ಟು ವಿಸ್ತೀರ್ಣ ಎ–ಗು | ಖರಾಬು ಎ–ಗು | ಉಳಿಕೆ ಎ–ಗು | | ಐನು ಎ–ಗು | ಖರಾಬು ಎ–ಗು | ಒಟ್ಟು ಎ–ಗು | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| 1 | 2 | 3 | 4 | 5 | 6 | 7 | 8 | 9 | | | 10 | 11 | 12 | 13 | 14 | 15 |
| | **ಗ್ರಾಮ: ಚಿನಕವಜ್ರ** | | | **ಹೋಬಳಿ: ಕಸಬಾ** | | | | **ತಾಲ್ಲೂಕು: ಮಧುಗಿರಿ** | | | | **ಜಿಲ್ಲೆ: ತುಮಕೂರು** | | | | |
| 1 | ರಾಮಯ್ಯ ಬಿನ್ ಚಿಕ್ಕಹೊನ್ನಪ್ಪ | 175/1 | ತರಿ | 0–08 ½ | – | 0–08 ½ | 0–60 | 0–0 ¾ | 0–00 ¼ | 0–01 | 0–03 | ರಸ್ತೆ | ಸ.ನಂ. 175/1ರ ಉಳಿಕೆ | ಸ.ನಂ.37 | ಸ.ನಂ. 175/4 | |
| | | **ಒಟ್ಟು** | | | | | | **0–0¾** | **0–00¼** | **0–01** | | | | | | |

**ಘೋಷ್ವಾರೆ**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ಹೋಬಳಿ | ತಾಲ್ಲೂಕು | ಜಿಲ್ಲೆ | ಭೂಸ್ವಾಧೀನಕ್ಕೆ ಒಳಪಡುವ ಜಮೀನಿನ ವಿಸ್ತೀರ್ಣ | | |
|---|---|---|---|---|---|---|---|
| | | | | | ಐನು ಎ–ಗು | ಖರಾಬು ಎ–ಗು | ಒಟ್ಟು ಎ–ಗು |
| **1** | **ಚಿನಕವಜ್ರ** | **ಕಸಬಾ** | **ಮಧುಗಿರಿ** | **ತುಮಕೂರು** | 0–0 ¾ | 0–00 ¼ | 0–01 |
| | | | | **ಒಟ್ಟು** | **0–0¾** | **0–00 ¼** | **0–01** |

**ಸಂಖ್ಯೆ: ಲೋಇ 148 ಇಎಪಿ 2011**

**PR-824**
**SC-200**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಇಂ. ವಿಜಯ್ , ಭೀ, ಚಂದಾಪುರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಬಾಹ್ಯ ಅನುದಾನಿತ ಯೋಜನೆಗಳು ( EAP)
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲ ಸಾರಿಗೆ ಇಲಾಖೆ

## ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

## (ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ)

## ಹೆಚ್ಚುವರಿ ಅಧಿಸೂಚನೆ

## ಸಂಖ್ಯೆ: ಲೋಇ 67 ಇಎಪಿ 2011 (ಪಿ2) ಬೆಂಗಳೂರು, ದಿನಾಂಕ: 08-06-2015

ಕರ್ನಾಟಕ ಹೆದ್ದಾರಿ ಕಾಯ್ದೆ 1964 ಕಲಂ 15ರ ಮೇರೆಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ 76 (ಲಿಂಕ್ ಸಂಖ್ಯೆ 42-A ದಾವಣಗೆರೆಯಿಂದ ಬೀರೂರುವರೆಗೆ) ರಸ್ತೆ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ 76ನ್ನು ಅಭಿವೃದ್ಧಿಪಡಿಸಲು ಅವಶ್ಯವಾಗಿದೆ ಎಂದು ಸರ್ಕಾರವು ಮನಗಂಡಿದೆ. ಅದುದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ 76ರ ರಸ್ತೆ ಅಭಿವೃದ್ಧಿಗೆ ಅವಶ್ಯಕವಾಗಿದೆ ಎಂದು ಈ ಮೂಲಕ ಘೋಷಿಸಲಾಗಿದೆ. ಕರ್ನಾಟಕ ಹೆದ್ದಾರಿ ಕಾಯ್ದೆ 1964ರ ಅಡಿಯಲ್ಲಿ ಈ ಕೆಳಕಂಡ ಜಮೀನುಗಳಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿ, ಸಿಬ್ಬಂದಿ ಅಥವಾ ಯೋಜನಾ ನಿರ್ದೇಶಕರ ಪರವಾಗಿ ಪ್ರತಿನಿಧಿಸುವವರನ್ನು ತಡೆಯುವುದಾಗಲಿ ಅಥವಾ ಅಡ್ಡಿಪಡಿಸುವುದಾಗಲಿ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾದ ನಂತರ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರ ಅನುಮತಿಯಿಲ್ಲದೆ ಸದರಿ ಜಮೀನುಗಳನ್ನು ವಿಲೆ ಮಾಡುವ ಒಪ್ಪಂದದ ಕ್ರಯ, ಕರಾರು, ಬೋಗ್ಯ, ಲೀಜ್, ಅದಲು-ಬದಲು ವಗೈರೆ ಮಾಡುವಂತಿಲ್ಲ. ಸದರಿ ಜಮೀನುಗಳಲ್ಲಿ ಈ ಅಧಿಸೂಚನೆ ಪ್ರಕಟಣೆಯ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದ್ದರೂ ಪರಿಹಾರ ಹಣ ನಿಗದಿ ಮಾಡುವಾಗ ಅಂತಹ ವ್ಯವಹಾರದ ಅಂಶಗಳನ್ನು ಗಣನೆ ತೆಗೆದು ಕೊಳ್ಳಲಾಗುವುದಿಲ್ಲ.

ಸದರಿ ಜಮೀನುಗಳ ವಿವರಗಳನ್ನು ಪರಿಶೀಲನೆಗಾಗಿ ವಿಶೇಷ ಜಿಲ್ಲಾಧಿಕಾರಿಗಳು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು, ಸಹಾಯಕ ಆಯುಕ್ತರು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ಮತ್ತು ಸಂಬಂಧಪಟ್ಟ ತಹಸೀಲ್ದಾರ್‌ರವರ ಕಛೇರಿಯಲ್ಲಿ ಇಡಲಾಗಿದೆ.

-: ಷೆಡ್ಯೂಲ್ :-

**ಗ್ರಾಮ:** ತೋಳಹುಣಸೆ **ಹೋಬಳಿ:** ಆನಗೋಡು **ತಾಲ್ಲೂಕು:** ದಾವಣಗೆರೆ **ಜಿಲ್ಲೆ:** ದಾವಣಗೆರೆ

| ಕ್ರಮ ಸಂಖ್ಯೆ | ಪಹಣಿಯಂತೆ ಖಾತೆದಾರರ ಹೆಸರು ಶ್ರೀಯುತರು/ಶ್ರೀಮತಿ | ಆಕಾರ ಬಂದಿನಂತೆ ಜಮೀನಿನ ವಿವರ | | | | | ಆಕಾರ | ಭೂಸ್ವಾಧೀನಕ್ಕೆ ಒಳಪಡುವ ವಿಸ್ತೀರ್ಣ | | | ಆಕಾರ | ಚಕ್ಕುಬಂದಿ | | | | ಪಹಣಿ ಯಂತೆ ಒಟ್ಟು ವಿಸ್ತೀರ್ಣ ಎ-ಗುಂಟೆ |
|---|---|---|---|---|---|---|---|---|---|---|---|---|---|---|---|---|
| | | ಸ.ನಂ | ತರಹೆ | ಒಟ್ಟು ವಿಸ್ತೀರ್ಣ ಎ-ಗುಂಟೆ | ಖರಾಬು ಎ-ಗುಂಟೆ | ಉಳಿಕೆ ಎ-ಗುಂಟೆ | | ಐನು ಎ-ಗುಂಟೆ | ಖರಾಬು ಎ-ಗುಂಟೆ | ಒಟ್ಟು ಎ-ಗುಂಟೆ | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | |
| **1** | **2** | **3** | **4** | **5** | **6** | **7** | **8** | **9** | | | **10** | **11** | **12** | **13** | **14** | **15** |
| 1 | *ವಿಕ್ರಂ ಬಿನ್ ವೇದಮೂರ್ತಿ | 63/1 | ಖುಷ್ಕಿ | 1-27 | 1-27 | - | - | 0-03 | - | 0-03 | 0-07 | ರೈಲ್ವೆ ಟ್ರಾಕ್ | 63/1ರ ಉಳಿದ ಭಾಗ | ರೈಲ್ವೆ ಟ್ರಾಕ್ | ಸ.ನಂ. 63/2A1AF, 63/2A1A5 | 1-27 |
| 2 | *ಸಿದ್ದಪ್ಪ ಬಿನ್ ಸಿದ್ದಿಂಗಪ್ಪ<br>*ಸಿದ್ದಮ್ಮ ಕೋಂ ಸಿದ್ದಪ್ಪ | 63/2A1A2 | ಖುಷ್ಕಿ | 0-02 | - | 0-02 | 0-04 | 0-00.04 | - | 0-00.04 | 0-01 | ರಸ್ತೆ | 63/2A1A2 ರ ಉಳಿದ ಭಾಗ | ಸ.ನಂ. 63/2A1B1 | ಸ.ನಂ. 63/2A1A1 | 0-02 |
| 3 | *ಜಿಯಾವುಲ್ಲಾ ಖಾನ್ ಬಿನ್ ಲೇಟ್. ಸಿ. ಅಬ್ದುಲ್ ರವೂಫ್ ಸಾಬ್ | 63/2A1A5 | ಖುಷ್ಕಿ | 0-02 | - | 0-02 | 0-08 | 0.00.04 | - | 0.00.04 | 0-01 | ರಸ್ತೆ | 63/2A1A5 ರ ಉಳಿದ ಭಾಗ | ಸ.ನಂ. 63/1 | ಸ.ನಂ. 2A1A1 | 0-02 |

| 1 | 2 | 3 | 4 | 5 | 6 | 7 | 8 | 9 | | | 10 | 11 | 12 | 13 | 14 | 15 |
|---|---|---|---|---|---|---|---|---|---|---|---|---|---|---|---|---|
| 4 | *ದಡ್ಡಿಮನಿ ಚಂದ್ರಪ್ಪ ಬಿನ್ ಬಸಪ್ಪ | 63/2A2 | ಖುಷ್ಕಿ | 0–09 | – | 0–09 | 0–18 | 0–00.08 | – | 0–00.08 | 0–01 | ರಸ್ತೆ | 63/2A2 ರ ಉಳಿದ ಭಾಗ | ಸ.ನಂ. 63/2A1A1 | ಸ.ನಂ. 77 | 0–09 |
| 5 | *ಲಕ್ಷ್ಮೀಬಾಯಿ ಕೋಂ ಟಿ ಎಲ್ ರಾಮನಾಯ್ಕ | 63/2A1B1 | ಖುಷ್ಕಿ | 0–22.08 | – | 0–22.08 | 0–44 | 0–01.04 | – | 0–01.04 | 0–02 | ರಸ್ತೆ | 63/2A1B1 ರ ಉಳಿದ ಭಾಗ | ಸ.ನಂ. 63/2A1A1 | ಸ.ನಂ. 63/2A1A2 | 0–22.08 |
| 6 | *ಟಿ ಜಿ ರವಿಕುಮಾರ್ ಬಿನ್ ಲೇಟ್ ಗೇಮ್ಯಾನಾಯ್ಕ<br>*ಟಿ ಜಿ ಸುರೇಶ್ ನಾಯ್ಕ ಬಿನ್ ಲೇಟ್ ಗೇಮ್ಯಾನಾಯ್ಕ | 63/2A1F | ಖುಷ್ಕಿ | 0–04 | – | 0–04 | 0–08 | 0–00.12 | – | 0–00.12 | 0–01 | 63/2೦1 ಈ ರ ಉಳಿದ ಭಾಗ | ರಸ್ತೆ | ಸ.ನಂ. 63/1 | ಸ.ನಂ. 63/2B | 0–04 |
| 7 | *ಎಂ.ಮಹಮದ ಹಯಾತ್ ಬಿನ್ ಮಲ್ಲಿಕ ಸಾಬ್ | 63/2B | ಖುಷ್ಕಿ | 0–06 | – | 0–06 | 0–12 | 0–00.08 | – | 0–00.08 | 0–01 | 63/2Bರ ಉಳಿದ ಭಾಗ | ರಸ್ತೆ | ಸ.ನಂ. 63/2A1F | ಸ.ನಂ. 63/2C | 0–06 |
| 8 | *ಹೆಚ್.ಕೆ. ನಜೀರ್ ಬಿನ್ ಅಬ್ದುಲ್ ಕರೀಮ್ ಸಾಬ್<br>*ಎನ್. ಜರೀನತಾಜ್ ಬಿನ್ ಹೆಚ್.ಕೆ. ನಜೀರ್<br>*ಎನ್. ನಾಸೀರ್ ಅಹ್ಮದ್ ಬಿನ್ ಹೆಚ್.ಕೆ. ನಜೀರ್<br>*ಎನ್. ನಾಜೀಂ ಅಹ್ಮದ್ ಬಿನ್ ಹೆಚ್.ಕೆ. ನಜೀರ್<br>*ಎನ್. ನಾದಿರ ಅಹ್ಮದ್ ಬಿನ್ ಹೆಚ್.ಕೆ. ನಜೀರ್<br>*ಶಿಫಾ ತಬಸ್ಸುಮ್ ಕೋಂ ಎನ್. ನಯಾಜ್ ಅಹ್ಮದ್ | 63/2C | ಖುಷ್ಕಿ | 0–02 | – | 0–02 | 0–04 | 0–00.04 | – | 0–00.04 | 0–01 | 63/2ಅ ರ ಉಳಿದ ಭಾಗ | ರಸ್ತೆ | ಸ.ನಂ. 63/2B | ಸ.ನಂ. 63/2A1A1 | 0–02 |

